ಸಾಮ್ರಾಟ

# ಉತ್ತರಕುಮಾರ

( ಸಂಗೀತ ನಾಟಕ )



ಬರೆದವರು :

ವಿನೋದರತ್ನ

**ಲಕ್ಷ್ಮಣರಾವ ಪುರಿ**



ಪ್ರಕಾಶಕರು :

**ಸಿಟಿ ಬುಕ್ ಸ್ಟಾಲ್, ಹುಬ್ಬಳ್ಳಿ**

೧೯೪೭ ರೂ ೧-೮-೦

# ಅರಿಕೆ

ಮಹನೀಯರೆ, ಸತ್ಯಪಕ್ಷಪಾತಿಗಳಾದ ಪಾಂಡವರ ಸತ್ಯಪ್ರಕಾಶವು ಸತ್ಯ ಸರಕಾರದ ಪ್ರಜರಿಗೆ ಸರಿಯಾಗಿ ತಿಳಿಯಲೆಂಬ ಭಾವನೆಯಿಂದ ಬೇರೆ ಯಾವ ಆಧಾರವೂ ಇಲ್ಲದೆ ಕೇವಲ ಧರ್ಮಮೂರುತಿಯ ಗುಣಗಳನ್ನೂ ಸತ್ಯ ಒಂದರಿಂದಲೆ ಕಳೆದ ರಾಜ್ಯವನ್ನು ನಿರಾತಂಕವಾಗಿ ಪಡೆದನೆಂಬುದನ್ನೂ ರಾಜ್ಯವನ್ನು ಪಡೆದುದು ಪ್ರಜಗಳ ಹಿತಕ್ಕೆಂಬುದನ್ನೂ ಇಂತಹ ದೇವಾಂಶಸಂಭೂತನಾದ ಮಹಾತ್ಮನನ್ನು ನಿಂದಿಸಿದವರಿಗೆ ನರಕವಾಗುವದೆಂಬುದನ್ನೂ ಮತ್ತು ಉತ್ತರಕುಮಾರ ನಾಟಕವೆಂದ ಕೂಡಲೇ ಈಗ ಪ್ರತಿಯೊಂದು ನಾಟಕ ಕಂಪನಿಯವರು ಅಭಿನೈಸುವ ನಾಟಕಕ್ಕೆ ಯಾವ ಸಂಬಂಧವಿಲ್ಲವೆಂಬುದನ್ನೂ ನಾಟ್ಯಪ್ರೇಮಿಗಳು ಓದಿ ತಿಳಿಯಲೆಂದು ಬರೆದಿರುವೆ. ಆದ್ದರಿಂದ ಇದರಲ್ಲಿರುವ ದೋಷಗಳನ್ನು ದೇಶಾಭಿಮಾನಿಗಳು ಸೂಚಿಸಿದಲ್ಲಿ ಸರಿಪಡಿಸಿಕೊಳ್ಳುವೆ.

ಈ ನಾಟಕವನ್ನು ರಂಗಭೂಮಿಯ ಮೇಲೆ ಪ್ರಯೋಗಿಸುವ ಹಕ್ಕು ಲೇಖಕರದಾಗಿದೆ.

ತಮ್ಮ ಪ್ರೇಮಾಭಿಲಾಷಿ

ವಿನೋದರತ್ನ

**ಲಕ್ಷ್ಮಣರಾವ ಪುರಿ**

ಬಲಭೀಮ ಪ್ರಕಸ್

# ಸಾಮ್ರಾಟ ಉತ್ತರಕುಮಾರ ನಾಟಕ

## ೧ನೇ ಅಂಕ

## ೧ನೇ ಪ್ರವೇಶ

ಮಹಲ ಪರದೆಯ ಮುಂದೆ

॥ ದೇವಸ್ತುತಿ ॥

**ತಾಳ, ದಾದರ** **ಸ್ತುತಿ.** **ರಾಗ, ಖಮಾಜ**

ಚಂದ್ರಮೌಳಿ । ಫಲಕಾರಿ । ಹಿತದೋರಿ । ಮುದಬೀರಿ । ಜಯತೋರಿ ।
ತೋರುತ ತೋರುತ ದಾರಿ ॥ ಕುಜನಸಂಹಾರಿ । ಸುಜನ ಉದ್ಧಾರಿ । ಗಿರಿವರ
ಸುವಿಹಾರ । ಭವಭಯ ನಿವಾರ । ನಾಮ ಅಪಾರ । ಪುರಹರ ಬಾಬಾಧೀರಾ ।
ಸುರನರ ಹಿತಸಾರಾ । ಮಾಯ ಕುಠಾರಾ । ಮಾರಸಂಹಾರ । ಜಗದೋದ್ಧಾರ ।
ಸರ್ವನುತಕರ । ಸರ್ವಹಿತಕರ । ನೀ ಕಾಯೋ ಜಗದಾಧಾರಾ ।

( ಮುಗಿದ ನಂತರ ಒಳಗೆ ಹೋಗುವರು. ರಸ್ತಾಪರದೆ ಬೀಳುವದು ಶಕುನಿಯು ಯೋಚಿಸುತ್ತಾ ಪ್ರವೇಶಿಸುವನು. )

**ಶಕುನಿ:**—ಲೋಕದಲ್ಲಿ ಮನುಷ್ಯನು, ಶೂರನೂ, ತಂತ್ರಗಾರನೂ, ಮುತ್ಸದ್ದಿಯೂ ಮೇಧಾವಿಯೂ ಪ್ರಾಜ್ಞನೂ ದೇಶಾಭಿಮಾನಿಯೂ ಎಂಬ ಹೆಸರನ್ನು ಶಾಶ್ವತವಾಗಿ ಉಳಿಸಿಕೊಳ್ಳಬೇಕಾದರೆ ಹಿಂದೆ ಎಷ್ಟೋ ದಾನ ಧರ್ಮ, ಪರೋಪಕಾರ, ವ್ರತ ನೇಮಗಳನ್ನು ಆಚರಿಸಿ ಪೂರ್ಣ ಪುಣ್ಯಶಾಲಿಯಾಗಿರಬೇಕು. ಇಂತಹ ಅಮಾನುಷವ್ಯಕ್ತಿ ಎಂದರೆ ಸೃಷ್ಟಿಯನ್ನು ಬದಲಿಸುವ ಶಕ್ತಿಯುಳ್ಳ ಶಕುನಿಯೊಬ್ಬನೇ ಇದಕ್ಕೆ ಕೌರವ ಪಾಂಡವರ ಕಲಹವೇ ನಿದರ್ಶನವಾಗಿರುವದು. ಯುದ್ಧ ಮಾಡಬೇಕೆನ್ನುವವರ ಮನಸ್ಸನ್ನು

ಕಂಡು ಹಿಡಿಯುವದು ಕಡುಗಲಿಗಳಿಗಲ್ಲದೆ ಹೇಡಿಗಳಿಗಲ್ಲಾ ಸತ್ಯಪಕ್ಷ ಪಾತಿಗಳಾದ ಪಾಂಡವರ ಐಶ್ವರ್ಯಯುಕ್ತವಾದ ರಾಜ್ಯವನ್ನು ಏನಾದರೊಂದು ಬಗೆಯಿಂದ ಅಪಹರಿಸ ಬೇಕೆಂದು ಬಕಪಕ್ಷಿಯಂತೆ ಬಹು ದಿನಗಳಿಂದ ಹೊಂಚು ಹಾಕುತ್ತಲಿದ್ದ ಕುಲಗೇಡಿ ಕೌರವರ ಮನಸ್ಸನ್ನು ಕಂಡುಹಿಡಿದು ಕಪಟ ದ್ಯೂತವನ್ನು ನಿರ್ಮಿಸಿ ಸತ್ಯಮೂರುತಿಯಾದ ಮಹತ್ಮಾ ಧರ್ಮರಾಯನಿಂದ ಮನಬಂದ ಹಾಗೆ ಪಣವನ್ನು ಕಟ್ಟಿಸಿ ಬಂಗಾರದಹೊಗೆ ಹಾಯುತ್ತಿದ್ದ, ಪಾಂಡವರ ಸಾಮ್ರಾಜ್ಯವನ್ನು ಅಪಹರಿಸಿ ವನವಾಸ ಕಷ್ಟವನ್ನುನುಭವಿಸುವದಕ್ಕೆ ಹಚ್ಚಿದವರು ಯಾರು ಶಕುನಿ (ಎದೆಗೆ ಕೈಹಚ್ಚಿ) ಸ್ವತಂತ್ರವಾಗಿದ್ದ ಸಾಮ್ರಾಜ್ಯವನ್ನು ಛಿನ್ನವಿಚ್ಛಿನ್ನ ಮಾಡುವದಕ್ಕೆ ಕಾರಣರು ಯಾರು ಶಕುನಿ. ಸ್ಥಿರವಾದ ರಾಜ್ಯವನ್ನು ಪರರ ಸ್ವಾಧೀನಕ್ಕೆ ಕೊಡಿಸಿದವರಾರು ಶಕುನಿ. ಶಕುನಿ ಎಂಬ ಈ ಪವಿತ್ರ ಮೂರಕ್ಷರಗಳಲ್ಲಿ ಮೂರು ಲೋಕಗಳೇ ಅಡಕವಾಗಿವೆ ಅದಕ್ಕಾಗಿ ಸೃಷ್ಟಿ, ಸ್ಥಿತಿಲಯ ಕಾರ್ಯಕ್ಕೆ ಕಾರಣೀಕರ್ತರಾದ ತ್ರಿಮೂರ್ತಿಗಳ ವ್ಯಾಪಾರದಂತೆ ಶಕುನಿಯ ವ್ಯಾಪಾರವು. ಜಯ ಭೇರಿಯನ್ನು ಹೊಡೆಯುತ್ತಾ ಅವ್ಯಾಹತವಾಗಿ ಎಡೆಬಿಡದೆ ನಡೆಯುತ್ತಲೇ ಇದೆ. (ಮುಂದೆನೋಡಿ, ಅವರಾರು ಓಹೋ ಮಹರಥಿ ಕರ್ಣ ಬಂದದ್ದು ಸುವರ್ಣ ಸಮಯ.

**ಕರ್ಣ:**—(ಹತ್ತಿರಬಂದು) ಶಕುನಿಮಾವನವರಿಗೆ ಮಹರಥಿಕರ್ಣನ ವಂದನೆ.

**ಶಕುನಿ:**—ಜಗತ್ ಪ್ರಕಾಶ ಸೂರ್ಯಪುತ್ರ ಕರ್ಣಾ ಯೋಚನೆಯಿಂದ ಯಾವಕಡೆಗೆ ಹೊಂಟಿ?

**ಕರ್ಣ:**—ಮಾವಾ ಮಹಾನುಭಾವನಾದ ದುರ್ಯೋಧನ ಮಹಾರಾಜನು ಪಾಂಡವರ ಶೋಧನಕ್ಕಾಗಿ, ಕಳುಹಿಪ ದೂತರು ಶೋಧವಾಗಲಿಲ್ಲವೆಂದು ಹೇಳಿದರಂತೆ ಅದಕ್ಕಾಗಿ ಬಹುಚಿಂತೆಯಲ್ಲಿರುವನೆಂಬ ವಾರ್ತೆಯನ್ನುಕೇಳಿ ದುರ್ಯೋಧನನಿಗೆ ಧೈರ್ಯಹೇಳಲು ಸಭೆಗೆ ಹೊರಟಿರುವೆ.

(ಸ್ವಗತ)

**ಶಕುನಿ:**—(ಆನಂದದಿಂದ) ಸಾಧನಕ್ಕೆ ಸರಿಯಾದ ಸಲಕರಣೆ

(ಪ್ರ) ಕರ್ಣ ನಡೆ ನಿರಾಶೆಯ ಕಾರ್ಗತ್ತಲಲ್ಲಿ ಕಳವಳಗೊಳ್ಳುತ್ತಿರುವ ದುರ್ಯೋಧನನಿಗೆ ಧೈರ್ಯವನ್ನು ಹೇಳಿ ಪ್ರೋತ್ಸಾಹಿಸಿ ಬರುವ ನಡೆ.

**ಕರ್ಣ:**—ಮಾವಾ ನನಗಾದರೂ ಪಾಂಡವರನ್ನು ಪುನಃ ಅಜ್ಞಾತ ವಾಸವೆಂಬ ಪಾಪಕುಂಡದಲ್ಲಿ ನೂಕುವವರೆಗೂ ಮನಸ್ಸಿಗೆ ನೆಮ್ಮದಿ ಇಲ್ಲಾ.

**ಶಕುನಿ:**—ಕರ್ಣಾ ಪಾಂಡವರೈವರ ಹೆಣಗಳು ನಾನು ಹೊತ್ತಿಸಿದ ಅಗ್ನಿಯಲ್ಲಿ ದಗ್ಧವಾಗುವವರೆಗೆ ಸಮಾಧಾನವಿಲ್ಲಾ. ಆ ಹುಂಬ ಭೀಮನು ನನ್ನನ್ನು ಕಂಡರೆ ಕಿಡಿಯನ್ನೇ ಕಾರುತ್ತಾನೆ ಕರ್ಣಾ ಏನಾದರೂ ಮಾಡಿ ಪಾಂಡವರ ಶೋಧ ಮಾಡಲೇಬೇಕು. ಅಂದರೇನೆ ನಮ್ಮ ಮಹತ್ವಾಕಾಂಕ್ಷೆಯು ಮನಸ್ಸಿನಂತಾಗುವದು.

**ಕರ್ಣ:**—( ಈರ್ಷೆಯಿಂದ ) ಮಾವಾ ಕೇಳು ಕರ್ಣನ ಹೆಸರನ್ನು ಕೇಳಿದ ಮಾತ್ರವೇ ಅಡವಿಯಲ್ಲಿಯ ಸಿಂಹಗರ್ಜನೆಯನ್ನು ಕೇಳಿದ ಮೃಗ ಪಕ್ಷಿ ಮುಂತಾದ ತಿರ್ಯಕ್ ಜಂತುಗಳೆಲ್ಲವೂ ಭಯದಿಂದ ನಡುಗುತ್ತ ಕಾಲ್ದೆಗೆಯುವಂತೆ ಹೇಡಿ ಕುಲಗೇಡಿ ಪಾಂಡವರು ಹೇಳಹೆಸರಿಲ್ಲದೆ ಓಡುವರು. ನಡೆ ಮೊದಲು ದುರ್ಯೋಧನನನ್ನು ಕಂಡು ಮುಂದಿನ ಆಲೋಚನೆ.

**ಶಕುನಿ:**—( ಬೆನ್ನು ಚಪ್ಪರಿಸಿ ಕಪಟದಿಂದ ) ಶಹಬಾಶ್ ಕರ್ಣಾ ಯಾದವ ಕುಲದೀಪಕನೆಂಬ ಹೆಸರು ನಿನಗಲ್ಲದೆ ಅನ್ಯರಿಗೆ ಶೋಭಿಸಲಾರದು ನಡೆ ಹೋಗುವ ( ಹೋಗುವರು )

( ರಸ್ತಾಪರದೆ ಎತ್ತುವರು ಹಿಂದೆ ದುರ್ಯೋಧನನ ದರ್ಬಾರು ಭೀಷ್ಮ, ದ್ರೋಣ ಮುಂತಾದವರು ಕುಳಿತಿರುವರು. ಎಡಬಲದಲ್ಲಿ ವೈತಾಳಿಕರು ಚೌರಿಯನ್ನು ಬೀಸುತ್ತಿರುವರು. )

**ದುರ್ಯೋಧನ:**—ಮಂತ್ರಿ ಮೊದಲಾದ ಶೂರ ಸೇನಾನಾಯಕರೇ ನನ್ನ ವಿಷಯವಾಗಿ ಪ್ರಜಗಳ ಅಭಿಪ್ರಾಯವೇನಿದೆ.

**ಮಂತ್ರಿ:**— ಮಹಾರಾಜ ಎಲ್ಲೆಲ್ಲಿಯೂ ತಮ್ಮ ಪರಾಕ್ರಮದ ಪ್ರಶಂಶೆಯೇ ಪ್ರಶಂಶೆ

**ದುರ್ಯೋಧನ:**— ಇನ್ನು ಗೆಲಿಯುತಕ್ಕ ಭಾಗವಾವದಿರುವುದೇ ?

**ಮಂತ್ರಿ:**—ನನಗೆ ತಿಳಿದಂತೆ ಈ ಮೂರು ಲೋಕಗಳಲ್ಲಿ ಯಾವದೂ ಇಲ್ಲಾ. ಪಾಂಡವರ ಶೋದಬಂದನ್ನು ಬಿಟ್ಟು

**ದುರ್ಯೋಧನ:** ಅದೇ ಮುಖ್ಯವಾದದ್ದು. ಪಾಂಡವರು ಶೋಧವಾಗುವವರೆಗೆ ನನಗೆ ಚಿಂತೆತಪ್ಪಿದ್ದಲ್ಲಾ.

ಇಷ್ಟರಲ್ಲಿ ಶಕುನಿ, ಕರ್ಣ, ಏಕಕಾಲಕ್ಕೆ ಇಬ್ಬರೂ ಪ್ರವೇಶಿಸಿ)

**ಶಕುನಿ-ಕರ್ಣ:**—ರಾಜಾ ಚಿಂತೆಯೆಂಬ ಶಬ್ದವನ್ನು ಶಕುನಿ ಮತ್ತೂ ಮಹಾರಥಿಕರ್ಣ ಇಬ್ಬರಿರುವವರೆಗೆ ಸ್ವಪ್ನದಲ್ಲಿ ಸಹ ನೆನೆಯಬೇಡ.

**ದುರ್ಯೋಧನ:**—( ಹಿಗ್ಗಿ ) ಮಾವಾಶಕುನಿ ಮಿತ್ರಾಕರ್ಣಾ ಜಗತ್ತಿನಲ್ಲಿನ ಶೂರಕ್ಷತ್ರಿಯ ವೀರರೆಲ್ಲರೂ ಏಕಕಾಲಕ್ಕೆ ದಂಡೆತ್ತಿ ಬಂದರೂ ಪ್ರಳಯಕಾಲದ ರುದ್ರನಂತೆ ಪ್ರತಿಯೊಬ್ಬರ ಶಿರಗಳನ್ನು ಚಂಡಾಡಿ ಆಕಾಶಕ್ಕೆ ತೂರಿಬಿಡುವೆ ಆದರೆ

**ಶಕುನಿ:**—ದುರ್ಯೋಧನಾ ಅನುಮಾನಕ್ಕೆ ಕಾರಣಗಳಾದ ಶಬ್ದಗಳನ್ನು ಉಚ್ಚರಿಸ ಬೇಡವೆಂದು ಈ ಮೊದಲೇ ಹೇಳಲಿಲ್ಲವೆ ?

**ದುರ್ಯೋಧನ:**—ಮಾವಾ ನಾನಾಡುವ ಮಾತಿನ ಮರ್ಮವನ್ನು ತಿಳಿಯದೆ ಸಮಾಧಾನ ಹೇಳುತ್ತಿರುವಿರಲ್ಲಾ.

**ಕರ್ಣ:**—( ನಕ್ಕು ) ರಾಜಾ ದುರ್ಯೋಧನಾ ಮರ್ಮದ ಮಾತೆಂದರೆ ಹೇಡಿಪಾಂಡವರ ಶೋಧವಷ್ಟೆ !

**ದುರ್ಯೋಧನ:**—ಕರ್ಣರಾಜಾ ಪಾಂಡವರ ವನವಾಸದ ಅವಧಿಯು ಮೂರು ಮಾಸಮಾತ್ರ ಉಳಿದಿರುವದು

**ಕರ್ಣ:**—ಅಷ್ಟರೊಳಗಾಗಿ ಸೃಷ್ಟಿಯೊಳಗಿನ ಸಪ್ತ ಸಮುದ್ರದಡಿಯಲ್ಲಿ ಅಡಗಿದರೂ ಆ ರಣಹೇಡಿಗಳಾದ ಪಾಂಡವರನ್ನು ಬೈಲಿಗೆಳೆತಂದು ಪುನಃ ವನವಾಸ ಅಜ್ಞಾತವಾಸವನ್ನು ಭೋಗಿಸುವದಕ್ಕೆ ಹಚ್ಚದಿದ್ದರೆ ಸೂರ್ಯಪುತ್ರನೆಂಬ ಹೆಸರೇಕೆ ( ಮೀಸೆಯ ಮೇಲೆ ಕೈ ಹಾಕುವನು )

**ದುರ್ಯೋಧನ:**—ಶಕುನಿಮಾವಾ ಅಕಸ್ಮಾತ್ ನಮ್ಮ ದುರ್ದೈವದಿಂದ ಪಾಂಡವರು ಶೋಧವಾಗದಿದ್ದರೆ ವನವಾಸವನ್ನು ಪೂರೈಸಿ ಬಂದೇ

ಬರುವರು ತಮ್ಮ ರಾಜ್ಯವನ್ನು ಕೇಳಿಯೇ ಕೇಳುವರು. ಆಗ ವಚನದಂತೆ ರಾಜ್ಯವನ್ನು ಕೊಡಲೇ ಬೇಕಲ್ಲವೇ ?

**ಭೀಷ್ಮ:**—(ಕಳಕಳಿಯಿಂದ) ಎಲೋ ಮಾತ್ಸರ್ಯದೊಡೆಯನಾದ ದುರ್ಯೋಧನ ಸತ್ಯವಂತರಾದ ಪಾಂಡವರು ಪಣದಂತೆ ಹನ್ನೆರಡುವರುಷ ವನವಾಸವನ್ನು ಚಿಕ್ಕವರಾದ ನಕುಲ, ಸಹದೇವರಿಂದೊಡಗೂಡಿ ಭಿಕ್ಷುಕ ರಂತೆ ಕೈಯಲ್ಲಿ ಮಣ್ಣಿನ ಪಾತ್ರೆಯನ್ನು ಹಿಡಿದು ತಿರಿದುಂಡು ಪಣವನ್ನು ಕೇವಲ ಕಷ್ಟದಲ್ಲಿ ಪೂರ್ತಿಸಿಬಂದು ತಮ್ಮ ಸ್ವರಾಜ್ಯವನ್ನು ಕೇಳಿದರೆ ಹೇಗೆ ಕೊಡಬೇಕೆಂಬ ಸಂಕಟವಲ್ಲವೆ ನಿನಗೆ. ಎಲೋ ಕೇಳು ನೀನು ಕೊಡುವದಕ್ಕೆ ಒಪ್ಪದಿದ್ದರೆ ಬಿಡುವರೆಂದು ಭಾವಿಸಿದೆಯಾ ಹಾಗಿದ್ದರೆ ಮಾತ್ರ ಅದು ನಿನ್ನ ಭ್ರಮೆಯು. ಜಗದ್ವಂದ್ಯನಾದ ಮಹಾತ್ಮನ ತಪಃಶಕ್ತಿಯಿಂದಾ ನಿಮ್ಮ ರಾಜ್ಯ ವನ್ನು ನಿಮಗೆ ಬಿಟ್ಟು ಕೊಟ್ಟಿದ್ದೇನೆ ನನ್ನನ್ನು ಮಾತ್ರ ಜೀವದಿಂದ ಬಿಟ್ಟು ಬಿಡಿರೆಂದು ಹೇಳುವ ಪ್ರಸಂಗವು ಕ್ಷಿಪ್ರದಲ್ಲಿಯೇ ಬರುವದು. ಇದು ಖಂಡಿತ ವೆಂದು ಸೆರಗಿನಲ್ಲಿ ಗಂಟುಹೋಡೆದು ಬಿಡು.

**ಶಕುನಿ:**—ದುರ್ಯೋಧನಾ ಈ ಪಕ್ಷಪಾತಿಯಾದ ಭೀಷ್ಮನನ್ನು ಸಭೆ ಯಲ್ಲಿ ಕರೆದುಕೊಂಡುದು ನಿನ್ನ ತಪ್ಪು

**ಕರ್ಣ:**—ರಾಜಾ ದುರ್ಯೋಧನ ಹೊಗಳು ಭಟರಾದ ಭೀಷ್ಮರ ಮಾತಿಗೆ ಒಂದು ಕವಡಿಯಷ್ಟು ಕೂಡಾ ಬೆಲೆಕೊಡಬೇಡಾ. ಯಾಚಕವೃತ್ತಿ ಯವರಾದ ಆಚಾರ್ಯರು ತಮ್ಮ ಧರ್ಮಕ್ಕನುಸಾರವಾಗಿ ಮಾತಾಡುತ್ತಿರು ವರು. ಉಂಡನುನೆಗೆ ಎರಡು ಬಗೆಯುವ ಪುಣ್ಯಾತ್ಮರೆಂದರೆ ಇವರೆ. ತಿನ್ನು ವದು ಕೌರವರಲ್ಲಿ ಹೊಗಳುವದು ಪಾಂಡವರಲ್ಲಿ ಇವರಲ್ಲವೇ ಹಿತೈಷಿಗಳು.

(ಇಷ್ಟರಲ್ಲಿ ಸತ್ಯವಾದಿ ಎಂಬ ಸೇವಕನು ಪ್ರವೇಶಿಸಿ ಬಾಗಿಲಲ್ಲಿ ಬಂದು ನಿಲ್ಲುವನು. ಅದನ್ನು ಕಂಡು ಮಣಿಮಂತನೆಂಬ ಸೇವಕನು)

**ಮಣಿಮಂತ:**— ಸರಕಾರ ಬಾಗಿಲಲ್ಲಿ ಸತ್ಯವಾದಿಯು ಬಂದು ಸ್ವಾಮಿಯ ದರ್ಶನವನ್ನಪೇಕ್ಷಿಸುತ್ತಿರುವನು.

**ದುರ್ಯೋಧನ:**—(ಹರುಷಿತನಾಗಿ) ಮಾವಾ ಸತ್ಯಸೇವಕನು ಬಂದ ಮೇಲೆ ಪಾಂಡವರ ನಿಜವಿಚಾರವು ತಿಳಿಯಲೇಬೇಕು. ಮಣಿಮಂತ ಸತ್ಯ ವಾದಿಯನ್ನು ಬರಮಾಡು.

**ಮಣಿವಂತ:**—ಅಪ್ಪಣೆ ( ಎಂದು ಹೋಗಿ ಕರೆದುಕೊಂಡು ಬರುವನು ಸತ್ಯವಾದಿಯು ಬಂದು ನಮಸ್ಕರಿಸಿ ನಿಲ್ಲುವನು. )

**ಶಕುನಿ:**—ಸತ್ಯಾ ನೀನು ಹೋದಕಾರ್ಯದಲ್ಲಿ ಜಯವೊ

**ಸತ್ಯವಾದಿ:**—ಶಕುನಿಮಹಾರಾಜ ಹೆಸರಿನಂತೆ ಕಾರ್ಯವನ್ನು ಮಾಡಿಕೊಂಡು ಬರದಿದ್ದರೆ ಆ ಹೆಸರಿಗೆ ಕಲಂಕವಲ್ಲವೆ ?

**ದುರ್ಯೋಧನ:**—ಶಕುನಿಮಾವಾ ಅವನ ವಿಷಯದಲ್ಲಿಮಾತ್ರ ಸಂಶಕ್ಕಾಸ್ಪದವಿಲ್ಲಾ ಸತ್ಯಾಹೇಳು ಸಮಾಚಾರವನ್ನು.

**ಸತ್ಯವಾದಿ:**—( ಕೈಕಟ್ಟಿಕೊಂಡು ) ಮಹಾರಾಜಾ ನಾನು ತಮ್ಮ ಅಪ್ಪಣೆಯಂತೆ ಸಕಲದೇಶವನ್ನು ಸಂಚರಿಸುತ್ತಾ ಪಾಂಡವರ ಶೋಧವಾಗದೆ ನಿರಾಶೆಯಿಂದ ಮರುಳಿಬರುವಾಗ ಮತ್ಸ್ಯದೇಶವು ಸಿಕ್ಕಿತು ಗುಪ್ತವಾಗಿ ಅಲ್ಲಿ ಎರಡು ದಿನಗಳಿದ್ದು ಅಲ್ಲಿಯ ರಾಜನಾದ ವಿರಾಟರಾಯನ ಸೇವಕರಲ್ಲಿ ಒಬ್ಬನೊಡನೆಸ್ನೇಹಬೆಳಸಿ ಸರ್ವ ಸಮಾಚಾರವನ್ನು ತಿಳಿದುಕೊಂಡೆ.

**ದುರ್ಯೋಧನ:**—( ಹಿಗ್ಗಿನಿಂದ ) ಶಹಬಾಶ್ ಮಾವಾ ಕೇಳಿದೆ ಏನು

**ಶಕುನಿ:**—ರಾಜಾ ಮುಂದಿನ ವಿಚಾರವನ್ನು ಕೇಳು

**ಸತ್ಯವಾದಿ:**— ಮುಂದಿನ ವಿಚಾರವು ಇದಕ್ಕಿಂತಲೂ ಆಶ್ಚರ್ಯವಾಗಿರುವದು.

**ದುರ್ಯೋಧನ:**—ವೇಳೆಗೆ ಅವಕಾಶವನ್ನು ಕೊಡಬೇಡಾ ಹೇಳಿಬಿಡು

**ಸತ್ಯವಾದಿ:**—ಮಹಾರಾಜ ಆ ವಿರಾಟರಾಯನ ಬೀಗನಂತೆ ಆತನ ಹೆಸರು ಕೀಚಕನಂತೆ ಮದ್ದಾನೆಯ ಬಲವುಳ್ಳವನಂತೆ.

**ಕರ್ಣ:**—ಮುಂದೆ ಹೇಳು.

**ಸತ್ಯವಾದಿ:**—ಹೊಸದಾಗಿ ಸೇವೆಗೆಬಂದ ದೇವದಾಸಿ ಎಂಬವಳನ್ನು ಬಲತ್ಕಾರ ಮಾಡಲೆತ್ನಿಸಲು ಆದೇರಾತ್ರಿ ಭ್ರಾಂತಃಪುತ್ರರಲ್ಲೊಬ್ಬ ಬಲಾಢ್ಯನು ಬಂದು ಒಂದೇ ಮುಷ್ಟಿಪ್ರಹರದಿಂದ ಕೀಚಕನ ಪ್ರಾಣವನ್ನು ಹರಣಮಾಡಿ ಮಾಯವಾಗಿಬಿಟ್ಟನಂತೆ.

**ದುರ್ಯೋಧನ:** (ಆಶ್ಚರ್ಯದಿಂದ) ಮಾವಾ ದೇವದಾಸಿಯಾರು ಭಾರತಪುತ್ರರಲ್ಲಿ ಬಲಾಢ್ಯನಾರು ನನಗೊಂದೂ ಅರ್ಥವಾಗಲಿಲ್ಲ.

**ಶಕುನಿ:**—ಅರ್ಥವಾಗದೆ ಏನು ಮೇಲೆ ಇದೆ.

**ದುರ್ಯೋಧನ:** — ಮಾವಾ ಸ್ಪಷ್ಟೀಕರಣಮಾಡಿ ಸಂಶಯವನ್ನು ಹೋಗಲಾಡಿಸು ತಡಮಾಡಬೇಡ.

**ಶಕುನಿ:**—(ಯೋಚಿಸಿದಂತೆ)ರಾಜಾ ಹೀಗಿರಬೇಕು ದೇವದಾಸಿಯೇ ದ್ರೌಪದಿಯಾಗಿರಬೇಕು. ಬಲಾಢ್ಯನಾದ ಕೀಚಕನನ್ನು ಕೊಂದವನೇ ಭಾರತ ಪುತ್ರರಲ್ಲಿ ಬಲಾಢ್ಯನಾದ ಭೀಮನಿರಬೇಕು ಅಂತೂ ಇಂತಹ ಅಸಾಧ್ಯ ಕಾರ್ಯವು ಗುಪ್ತಗಾಮಿಗಳಾದ ಪಾಂಡವರಿಂದಲ್ಲದೆ ಅನ್ಯರಿಂದ ಸಾಧ್ಯ ವಿಲ್ಲವೆಂದು ನಿಸ್ಸಂದೇಹವಾಗಿ ಹೇಳಬಹುದು.

**ಕರ್ಣ:**—ತರ್ಕಶಾಸ್ತ್ರದಲ್ಲಿ ನಿಪುಣರಾದ ಶಕುನಿಮಾವನವರ ಮಾತು ಅಕ್ಷರಶಃನಿಜವಿದೆ

**ದುರ್ಯೋಧನ**— ಕರ್ಣಾ ಪಾಂಡವರು ಪ್ರಕಟರಾಗಬೇಕಾದರೆ ಅದಕ್ಕೆ ತಕ್ಕ ಕಾರಣ ಒಂದು ಬೇಕಲ್ಲವೇ!

**ಶಕುನಿ** – ರಾಜಾ ಸಲಹೆಯನ್ನು ನಾನು ಕೊಡುವೆ ಕೇಳು. ವಿರಾಟ ನಗರದ ಸುತ್ತುಮುತ್ತಿನ ಗೋವುಗಳನ್ನು ತಕ್ಷಣ ಹಿಂತಿರಿಸಿ ಬಂಧಿಸಿಬಿಡು. ಪಾಂಡವರು ಅಲ್ಲಿದ್ದದ್ದೇ ಸತ್ಯವಾದರೆ ಉಪ್ಪು ತಿಂದವನ ಉಪಕಾರವನ್ನು ತೀರಿಸಿಯೇ ತೀರಬೇಕೆಂಬ ಸದುದ್ದೇಶದಿಂದ ಸತ್ಯಪಕ್ಷಪಾತಿಗಳಾದ ಪಾಂಡ ವರು, ಬೈಲಿಗೆ ಬಂದೇ ಬರವರು. ಆಗ ಅವರನ್ನು ಗುಪ್ತವಾಗಿ ಗುರ್ತಿಸಿ ಆನಂದದಿಂದ ಪುನಃ ಹನ್ನೆರಡುವರುಷ ವನವಾಸ, ಒಂದು ವರುಷ–ಅಜ್ಞಾತ ವಾಸಕ್ಕೆ. ಆಮಂತ್ರಣಕೊಟ್ಟು ಕಳುಹಿಸಿದರಾಯಿತು.

**ದುರ್ಯೋಧನ:**— ಕರ್ಣಾ ಹೇಗಿದೆ ಶಕುನಿಮಾವನವರ ತಲೆ ?

**ಕರ್ಣ:** - ರಾಜಾ. ಶಕುನಿಮಾವನವರತಲೆ ಎಂದರೆ ಸಾಮಾನ್ಯ ವಾದ ತಲೆಯಲ್ಲಾ ಬೆಲೆ ಇಲ್ಲದ ತಲೆ. ಸಾವಿರತಲೆ ಇರುವದಕ್ಕಿಂತಲೂ, ಶಕುನಿಮಾವರಂತಹ ಒಂದು ತಲೆ ಇದ್ದರೆ ಸಾಕು.

**ದುರ್ಯೋಧನ:**—ಸರಿ ಇನ್ನೇನು, ಗುರುಗಳಾದ, ಭೀಷ್ಮದ್ರೋಣರ ಒಪ್ಪಿಗೆ ಯೊಂದಾದರಾಯಿತು. ಮುಂದಿನ ಕೆಲಸವು ತಾನಾಗಿ ನಡೆದು ಹೋಗುವದು.

**ಶಕುನಿ:**—(ನಕ್ಕು) ಜೇನುತುಪ್ಪಕ್ಕೆ ನೊಣದಸಾಕ್ಷಿ ಎಂಬಂತೆ, ಅವರ ಒಪ್ಪಿಗೆಏತಕ್ಕ ಬೇಕಾಗಿದೆ.

**ಭೀಷ್ಮ:**— ಸಮ್ರಾಟಕ್ಕೆ ಮಿಕ್ಕುಳಿದವರನ್ನು ಲೆಕ್ಕಿಸದೆ ಶಕುನಿಯು ಸೊಕ್ಕಿನಿಂದ ಮಾತಾಡ ತ್ತಿರುವನು. ಇಂತಹ ಕುತಂತ್ರಿಯ ಮಾತಿಗೆ ಮರುಳಾಗಿ ಮರವನ್ನು ಕಡಿದು ಮೈಮೇಲೆ ಹಾಕಿಕೊಂಡಂತೆ ನೈಮರೆಯ ಬೇಡ. ಸ್ವಲ್ಪ ದೂರದೃಷ್ಟಿಯಿಂದ ವಿಚಾರಮಾಡಿನೋಡು. ಧರ್ಮ ಮೂರುತಿ ಎಂದರೆ, ಸಾಮಾನ್ಯನಲ್ಲಾ ಸತ್ಯದಲ್ಲಿ ಹರಿಶ್ಚಂದ್ರ ನಂತೆಯೂ, ತ್ಯಾಗದಲ್ಲಿ ಕರ್ಣನಂತೆಯೂ, ತೇಜಸ್ಸಿನಲ್ಲಿ ಮಾರ್ತಾಂಡ ನಂತೆಯೂ, ಪರಾಕ್ರಮದಲ್ಲಿ ಮಹಾವಿಷ್ಣುವಿನಂತೆಯೂ, ದಯೆಯಲ್ಲಿ ಶಿವನಂತೆಯೂ, ಸಕಲಸದ್ಗುಣಗಳಿಂದ ಕೂಡಿದ ಶಾಂತ ಮೂರುತಿಯು ಜಗತ್‌ಕಲ್ಯಾಣಕ್ಕಾಗಿ ಜ್ಞಾನಶಕ್ತಿಯನ್ನೂ, ತಪಃಶಕ್ತಿಯನ್ನೂ, ಉಪ ಯೋಗಿಸಿ, ಸತ್ಯಧರ್ಮ ಅಹಿಂಸಾದಿಗಳ ಮಹತ್ವಸ್ಥಾನವೆನಿಸಿದವನು ಕೇವಲ ಅಹಿಂಸೆ ಎಂಬ ತತ್ವದ ಸತ್ಯದಿಂದ ಸ್ವರಾಜ್ಯವನ್ನು ಸ್ಥಾಪಿಸಿ ಮಹಾತ್ಮನೆಂಬ ಪವಿತ್ರನಾಮವನ್ನು, ಆ ಚಂದ್ರಾರ್ಕ ಉಳಿಯುವಂತೆ ಮಾಡಿದವನು. ಇಂತಹ ದೇವ ಮೂರುತಿಯ ಮುಂದೆ, ಅರಿಷಡ್ವರ್ಗಗಳ ಆಟವೆಷ್ಟು ಸಾಗದಿರುವಾಗ, ಹುಲ್ಲು ಜೀವಿಗಳ ಪಾಡೇನು ದುರ್ಯೋಧನ ಪಾಂಡವರು ವಿರಾಟನಗರದಲ್ಲಿರುವದೇ ಸತ್ಯವಾದರೆ, ನೀನೇ ಹೋಗಿ ನಿನ್ನ ದಾಯಾದಿಗಳನ್ನು ಕರೆದುಕೊಂಡು ಬರುವದಕ್ಕೆ ಆತಂಕವೇನಿದೆ. ಅಭಿ ಮಾನವನ್ನೇಬಿಟ್ಟು, ಪ್ರೀತಿಯಿಂದ ಅವರನ್ನು ಕರೆದುಕೊಂಡು ಬಂದು, ಅವರ ಹಕ್ಕಿನ ರಾಜ್ಯವನ್ನು ಅವರಿಗೆಕೊಟ್ಟು, ಪ್ರೇಮವನ್ನು ಸಂಪಾದಿಸು. ಸತ್ಯ ಪಕ್ಷಪಾತಿಗಳಾದ ಪಾಂಡವರಲ್ಲಿ, ಮುಖ್ಯನಾದ ಮಹಾತ್ಮಾ ಧರ್ಮರಾಯ ನನ್ನು, ಇದು ವರೆಗೆ, ಅಸೂಯೆಯಿಂದ ನೋಡಿದ್ದಾಯಿತಷ್ಟೆ! ಇನ್ನುಮೇಲೆ ಮಾತ್ರ ಹಾಗೆ ನೋಡಬೇಡ. ಈ ನಮ್ಮ ಭಾರತದ ಉದ್ಧಾರಕ್ಕೆ ಆತನೇ ಕಾರಣನು. ಮೇಲಾಗಿ ಜಗತ್ತಿನ ಮಾರ್ಗದರ್ಶಕನು. ಇಂತಹ

ಪುಣ್ಯಾತ್ಮನನ್ನು ಪಡೆದ ಭಾರತಮಾತೆಯೇ ಧನ್ಯಳು ಇಂತಹ, ಬಂಧುಗಳನ್ನು ಪಡೆದ ನಿನ್ನ ಪುಣ್ಯಕ್ಕೆ ಪಾರವುಂಟೆ? ಮಹಾತ್ಮನ ನಿಜಸ್ಥಿತಿಯನ್ನು ತಿಳಿಯಲು ಸರ್ವಾಂತರ್ಯಾಮಿಯಾದ, ಭಗವಂತನಿಂದಲೂ ಸಾಧ್ಯವಿಲ್ಲದಿರುವಾಗ, ನಿಮ್ಮಂತಹ ಹುಲ್ಲುಜೀವಿಗಳ ಪಾಡೇನು.

**ದುರ್ಯೋಧನ:**— ಈಗ ನೀವು ಕಂಠಶೋಷಣೆಮಾಡಿಕೊಂಡು, ಸೂಚಿಸಿದ ಉಪದೇಶವು, ನಿಮ್ಮ ವಯಸ್ಸಿಗೂ ಯೋಗ್ಯತೆಗೂ ಸರಿಯಾಗಿದೆ. ಪಾಪಿಗಳಾದ ಪಾಂಡವರಿಗೆ ರಾಜ್ಯ. (ನಕ್ಕು) ರಾಜ್ಯದ ಮಾತು ಒತ್ತಟ್ಟಿಗಿರಲಿ. ಸೂಜಿಯಮೊನೆಗೆ ಹತ್ತುವಷ್ಟು ಮಣ್ಣು ಕೂಡಾ ಸಿಗುವದಿಲ್ಲವೆಂದು ಸಾರಿಸಾರಿ ಹೇಳುವೆ. ಪಾಂಡವರಲ್ಲಿರುವ ಪ್ರೇಮಕ್ಕೆ ಕಟ್ಟುಬಿದ್ದು ಪಕ್ಷಪಾತದಿಂದ ಮಾತಾಡುವಿರಿ.

**ಭೀಷ್ಮ:**— (ಸಮಾಧಾನವಿಲ್ಲದೆ) ಪಕ್ಷಪಾತ, ನಿಷ್ಪಕ್ಷಪಾತಿಯಾದ ಈ ಭೀಷ್ಮನಲ್ಲಿ ಇದು ಪಕ್ಷಪಾತವಲ್ಲಾ. ಪಾಪಿಗಳಾದ ಕೌರವರ ಅಧಃಪಾತ. ದುರ್ಯೋಧನ ಕಪಟಿಯಾದ, ಶಕುನಿಯ ಕಿವಿಮಾತುಗಳಿಗೆ, ಮರುಳಾಗಿ, ನೀನಾಗಿಯೇ ನಿನ್ನ ಮರಣಕ್ಕೆ ಆಮಂತ್ರಣವನ್ನು ಕೊಡಬೇಡ. ನನ್ನ ಹಿತೋಕ್ತಿಗಳಿಗೆ ಕಿವಿಗೊಡು. ಮನಸ್ಸನ್ನು ಪಾಪದಿಂದ ದೂರುಮಾಡು. ಮಹಾತ್ಮನಲ್ಲಿ ಮನವಿಡು, ಬಂಧುಗಳಿಗೆ ರಾಜ್ಯಕೊಡು. ಸುಮಾರ್ಗದಲ್ಲಿ ಅಡಿಇಡು ಪಾಪಿಯಾದ ಶಕುನಿಯನ್ನು ಸಭೆಯಿಂದ ದೂಡಿಬಿಡು.

**ಶಕುನಿ:**— (ಸಿಟ್ಟಿನಿಂದ) ಹಾ! ಹಾ!! ಆಚಾರ್ಯರೇ ದುಡುಕಬೇಡಿ. ಹೇಸಿಯ ಪಾಪವು ಸನ್ಯಾಸಿಗೆಂಬಂತೆ, ನನ್ನನ್ನೇಕೆದೂಡುವಿರಿ.

**ಭೀಷ್ಮ:**— ಸಾಕುಮಾಡು ನಿನ್ನ ಕಪಟ ವಾಕ್ಚಾತುರ್ಯವನ್ನು

**ತ್ರಿ ತಾಳ** ಪದ ರಾಗ **ಕಾನಡ**

ಕುರುಕುಲ ಕಪಟಸ್ವಾರ್ಥಿಯೇ | ಧೂರ್ತನಾದಾ ನಿನ್ನಂ ಬಡಲಾ ಮೂಢನೇ ||
ಚತುರತೆ ತೋರುತ ತ್ವರದಿಬೆಳೆಸುತೆ | ಒತವಂ ತೋರುತೆ | ಚಿತೆಯಂ ಸೃಜಿಸುತೆ ಕುಪಥಗಾಮಿನೀ |

ಕಪಟ ವಿಷಘಾತುಕ, ಸಾರ್ವಭೌಮನಾದ ದುರ್ಯೋಧನನ, ವಿನಾಶಕ್ಕೆ

ಹಾಗೆ, ಪಟ್ಟಣವನ್ನು ಕಟ್ಟಿಸಿ, ಅವರ ಅಪಾರವಾದ ಐಶ್ವರ್ಯವನ್ನು ಅಪ ಹರಿಸಿ ವನವಾಸ ಅಜ್ಞಾತವಾಸ ಭೋಗಿಸುವದಕ್ಕೆ ಹಚ್ಚಿದವರು ಯಾರು, ಶಕುನಿ ಪರಮಪತಿವ್ರತಾಶಿರೋಮಣಿಯೂ, ದೇಶಭಕ್ತಳೂ, ದೇಶದಸಲು ವಾಗಿ, ಬಿಜಜನಾಂಗದ ಉದ್ಧಾರಕ್ಕಾಗಿ ಪ್ರಾಣಾರ್ಪಣಮಾಡಲು ಸಿದ್ಧಳಾದ ವಳೂ ಮಹಾತ್ಮನ ಬಲಗೈಯಂತಿದ್ದ ಲಕ್ಷ್ಮೀಸಮಾನಳಾದ ದ್ರೌಪದಾದೇವಿ ಯನ್ನು ಚಂಡಾಲರಾದ ಕೌರವರ ದಾಸಿಯನ್ನಾಗಿ ಮಾಡಿಸಿದವರು ಯಾರು ಶಕುನಿ. ಅಂದು ತುಂಬಿದ ಸಭೆಯಲ್ಲಿ ಅದೇ ಪುಣ್ಯಾತ್ಮಳ ಸೀರೆಯನ್ನು ಉನ್ಮತ್ತಪಶುವಾದ ದುಶ್ಶಾಸನಿಂದ ಸೆಳೆಯುವದಕ್ಕೆ ಹಚ್ಚಿದವರು ಯಾರು ನಿರ್ಲಜ್ಜ ಶಕುನಿ ಪ್ರಾಮಾಣಿಕ ಪುತ್ಥಳಿಯಾದ ಪಾಂಚಾಲಿಯ ಮಾನಭಂಗ ಮಾಡುವಾಗ ಈ ಹೊಲೆಯ ಶಕುನಿ ಇದ್ದಾ ದುರ್ಮದಾಂಧ ದುಶ್ಶಾಸನನಿದ್ದ ಆಗ ಈ ಪಾಪಿಗಳ ರುಂಡವನ್ನು ಚಂಡಾಡಿ ಮಕ್ಕಳಾಟದ ಚಂಡಿನಂತೆ ಆಕಾಶಕ್ಕೆ ಹಾರಿಸಿ ನಿನ್ನ ಅರಮನೆಯನ್ನು ರಕ್ತದಿಂದ ತುಂಬಿ ಹೆಣಗಳ ರಾಶಿ ಯನ್ನೊಟ್ಟಲು ಮಹಾತ್ಮನ ಮುಂದಾಳುಗಳಾದ ಭೀಮಾರ್ಜುನರು ಬಹಳ ವಾಗಿ ಹಾತೊರೆದರು. ಆದರೆ ಅಹಿಂಸಾಧರ್ಮಮೂರುತಿಯು ಅಪ್ಪಣೆಯನ್ನು ಕೊಡಲಿಲ್ಲ ಪಾಂಡವರ ನಾಶಕ್ಕೆ ಎಷ್ಟೆಷ್ಟು ಕಷ್ಟನಷ್ಟಗಳನ್ನು ತಂದೊಡ್ಡಿದರೂ ಪಾಂಡವರ ಪ್ರಾಣಾಧಾರನಾದ ಶ್ರೀಕೃಷ್ಣಪರಮಾತ್ಮನ ಕೃಪಾಖಡ್ಗವು ಅವು ಗಳನ್ನೆಲ್ಲ ನಾಶಮಾಡಿ ತೊಟ್ಟಿಲಲ್ಲಿ ಆಡುವ ಶಿಶುಗಳಂತೆ ಸುಖವಾಗಿರಿಸುವನು.

**ಶಕುನಿ:**—ದುರ್ಯೋಧನ ಕೇಳಿದೆ ಏನು ಬಾಯಲ್ಲಿ ಹಲ್ಲಿಲ್ಲದೆ ಅನ್ನದ ರುಚಿಗಾಗಿಬಿದ್ದ ಈ ಮುದಿಭೀಷ್ಮರ ಮಾತುಗಳನ್ನು

**ಭೀಷ್ಮ:**—ಬಾಯಿಮುಚ್ಚು ಕೋತಿಯೇ ಭೀಷ್ಮನ ಬೆಲೆಯನ್ನು ಕಟ್ಟು ವದು ಕವಡಿ ಕಿಮ್ಮತ್ತಿನ ಕರ್ಣ ಶಕುನಿಯವರಿಂದ ಸಾಧ್ಯವೆ ರಾಜಾಪ್ರತ್ಯಕ್ಷ ಸ್ಥಿತಿ ಪರೋಕ್ಷನಲ್ಲಿ ನಿಂದೆ ಇಂತಹ ಕೀಳುಕುಲಾಧಮರ ಮಾತಿಗೆ ಕಿವಿ ಗೊಡುವ ನಿನಗೆ ಕೇಡು ಕಟ್ಟಿಟ್ಟದ್ದೇ ವಿಚಾರಮಾಡು.

**ಕರ್ಣ:**—(ಅಪಮಾನಿತನಾಗಿ) ಇಂತಹ ಕಠೋರವಾಕ್ಯಗಳನ್ನು ಪ್ರತ್ಯಕ್ಷ ಸಮ್ರಾಟನ ಸಮಕ್ಷಮ (ಖಡ್ಗಕ್ಕೆ ಕೈಹಾಕುವನು.)

**ದುರ್ಯೋಧನ:**—ಕರ್ಣರಾಜ ತಾಳೆ. ಯು ಜಯದ ಸೂಚನೆಯು.

**ಭೀಷ್ಮ**:— ದುರ್ಯೋಧನಾ ಹುರುಳಿಲ್ಲದವಾತಿಗೆ ಹುರುಪಿಗೆದ್ದು ಹುತಾಗ್ನಿಯಲ್ಲಿ ದಗ್ಧನಾಗಬೇಡ ಭೀಮಾರ್ಜುನರು ಕೆರಳಿನಿಂತರೆ ಈ ಶಕುನಿ ಕರ್ಣ ಜಯದ್ರಥ ಮೊದಲಾದ ನಿನ್ನಹೊಗಳುವ ಭಟರು ಬೇಸಿಗೆಯ ಧೂಳಿಯಂತೆ ಮಾಯವಾಗುವರು.

**ಕರ್ಣ**:—ರಾಜಾ ಈ ಕೇಡಿಗನ ಮಾತುಗಳನ್ನು ಕೇಳಿದೆಯಾ ಪ್ರತಿಕ್ಷಣವೂ ಸಮರವನ್ನೇ ಎದುರುನೋಡುತ್ತಿರುವ ಸಮರಸಿಂಹನಿಗೆ ಬ್ರಹ್ಮಾಂಡದೊಡೆಯನಾದ ಬಾಲ ಭಾಸ್ಕರನಿಗೆ ಹೇಡಿಯಾದ ಅರ್ಜುನನು ಸಾಟಿಯಾಗುವನೆ ಪರರಸಹಾಯದಿಂದ ಮೆರೆವ ಪಾರ್ಥನ ಮಾತು ಹಾಗಿರಲಿ ಪ್ರಪಂಚ ನಿರ್ಮಾಣಕ್ಕೆ ಕಾರಣೀಕರ್ತರಾದ ಅಜಹರ ಪಿನಾಕಿಗಳನು ಕಣ್ಣುಮುಚ್ಚಿ ತೆರೆಯುವದರೊಳಗಾಗಿ ಮೋಡದಬ್ಬರಗಳಿಂದ ಮುಸುಕಿದ ಕತ್ತಲೆಯನ್ನು ಹೋಗಲಾಡಿಸುವ ಸೂರ್ಯ ಪ್ರಕಾಶದಂತೆ ಸದೆಬಡೆದು ವಿಜಯಮಾಲೆಯನ್ನು ಹಾಕಿ ನಿಶ್ಚಿಂತ ನನ್ನಾಗಿಮಾಡುವೆನು ಅಲ್ಪಾಯುಷಿಗಳಾದ ಈ ಮುದಿಹದ್ದುಗಳಿಗೆ ಮೊದಲು ಅಪ್ಪಣೆಯನ್ನುಕೊಡು. ಹೋಗಲಿ ಭವಿಷ್ಯ ಹೇಳುವದಕ್ಕೆ.

**ಶಕುನಿ**:—ಶಹಬಾಶ ಕರ್ಣಾ ಪಾಂಡವ ಪಕ್ಷಪಾತಿಗಳಿಗೆ ಸಮರ್ಪಕ ಉತ್ತರಕೊಟ್ಟೆ.

**ದುರ್ಯೋಧನ**:— ಪಿತಾಮಹರೇ ಈ ವಾದ ವಿವಾದಗಳೇನಿದ್ದರೂ ನೀವು ನನ್ನ ಸಂಗಡ ಬರಲೇಬೇಕು.

**ಭೀಷ್ಮ**:—ರಾಜಾ ಪ್ರತಿಯಾಡ ಬಲ್ಲನೆ ನಿನ್ನ ಉಪ್ಪಿನಿಂದು ಬೆಳೆದ ಈ ದೇಹವು ನಿನ್ನದಾಗಿರುವದು.

**ದುರ್ಯೋಧನ**:— ಶಕುನಿಮಾವನವರ ಸೂಚನೆಯಂತೆ ವಿರಾಟರಾಯನ ಉತ್ತರ ದಕ್ಷಿಣದಿಕ್ಕಿನ ಗೋವುಗಳನ್ನು ಹರಣಮಾಡುವದೇ ನಿರ್ಧಾರವಾಯಿತು. ನಡೆಯಿರಿ ಸೈನ್ಯದ ಸಿದ್ಧತೆಗೆ.

**ಎಲ್ಲರೂ**:—ಜಗದೇಕವೀರ ದುರ್ಯೋಧನ ಮಹಾರಾಜನಿಗೆ ಜಯವಾಗಲಿ ವೈರಿಗಳು ಹತರಾಗಲಿ.

(ಎಂದು ಅಂದು ಎಲ್ಲರೂ ಹೋಗುವರು ರಸ್ತಾ ಪರದೆ ಬೀಳುವದು)

## ೨ನೇ ಪ್ರವೇಶ

( ಶಕುನಿಯು ರಸ್ತಾಪರದೆಯ ಮುಂದೆ ಯೋಚಿಸುತ್ತ ಪ್ರವೇಶಿಸುವನು )

**ಶಕುನಿ:**— ಏನುಮಾಡಲಿ ಎಷ್ಟು ಬಗೆಯಿಂದ ಮನಸ್ಸಿಗೆ ಸಮಾಧಾನ ಹೇಳಿದರೂ ಅಗ್ನಿಯಉಕ್ಕು ನಿಲ್ಲಲೊಲ್ಲದು ಮನಸ್ಸಿನ ದುಸ್ಸಹ ಚಿಂತಾಗ್ನಿಯಿಂದ ಶರೀರವು ದಹಿಸುತ್ತಿರುವುದು. ಎಲೋ ಅಂತರಂಗವೈರಿ ದುರ್ಯೋಧನ ನಿನ್ನ ಕತ್ತಲೆಯ ಕಾರಾಗಾರವನ್ನು ನಾನಿನ್ನು ಮರೆತಿಲ್ಲಾ ಒಂದೇ ರಕ್ತದಿಂದಬಂದ ನನ್ನ ಒಂದುನೂರುಜನ ಸಮಸಹೋದರರನ್ನು ಏನೊಂದೂ ಕಾರಣವಿಲ್ಲದೆ ಬಂಧನದಲ್ಲಿಟ್ಟು. ಅಂತಃಕರಣದ ಲವಲೇಶವೂ ಇಲ್ಲದೆ ವಾರಕ್ಕೊಮ್ಮೆ ಅನ್ನವನ್ನು ಕೊಡಿಸುತ್ತಿದ್ದೆ. ಹಶಿವೆಯತಾಪವನ್ನು ತಾಳಲಾರದ ನನ್ನ ಬಂಧುಗಳು ಹಾವಿನಂತೆ ಹವೆಯಿಂದಲೇ ತೃಪ್ತರಾಗುತ್ತಾ ದಿನದಿನಕ್ಕೆ ಕೃಶರಾಗುತ್ತಾ ದಿಕ್ಕಿಲ್ಲದವರಂತೆ ಒಬ್ಬೊಬ್ಬರಾಗಿ ಸತ್ತುಹೋದರು. ಮೃತ್ಯುವಿನ ಕೊನೆಯ ಉಚ್ಛ್ವಾಸದಿಂದ ನಿನ್ನನ್ನು ಬಾರಿಬಾರಿಗೂ ಶಪಿಸುತ್ತಾ ಆ ಮಹಾಘೋರ ಹಿಂಸೆಯ ಪ್ರತಿಕ್ರಿಯೆಯನ್ನು ನನಗೊಪ್ಪಿಸಿರುವರು ಅದನ್ನು ನಾನು ಮರೆತಿರುವೆನೆಂದು ಭಾವಿಸಿದೆಯಾ ಇಲ್ಲಾ ಮರೆಯುವದಕ್ಕೆ ಸಾಧ್ಯವಿಲ್ಲಾ ಮರೆಯುವದೃಶ್ಯವೂ ಅಲ್ಲಾ ಅವರ ಮೃತದೇಹದ ಸ್ಥಿರಶೂನ್ಯದೃಷ್ಟಿಯು ಸಿಡಿಲಿನಂತೆ ಹೃದಯದಲ್ಲಿ ಈಗಲೂ ತಲ್ಲಣಗೊಳ್ಳುತ್ತಿರುವದು. ಕುರುರಕ್ತದ ಅಜಸ್ರಧಾರೆಯಿಂದ ಪುನಃ ಅವರನ್ನು ಉಜ್ಜೀವನಗೊಳಿಸುವೆನು ಎಲೋ ಪಾಪಿ ದುರ್ಯೋಧನ ( ಮೇಲೆ ತೋರಿಸಿ ) ಅಲ್ಲಿನೋಡು ಬಂಧುವೆ ವಿಳಂಬ ಮಾಡಬೇಡಾ ನಮ್ಮನ್ನು ಪರಿಪರಿಯಿಂದ ಹಿಂಶಿಸಿದ ವೈರಿಯ ಸೇಡನ್ನು ತೀರಿಸಿಕೊಳ್ಳದವಿನಃ ನಮ್ಮ ಆತ್ಮಕ್ಕೆ ಶಾಂತಿಯಿಲ್ಲವೆಂದು ದೈನ್ಯತೆಯಿಂದ ಹೇಗೆ ಹೇಳುತ್ತಿರುವರು. ( ಮೇಲೆನೋಡಿ ) ಬಂಧುಗಳೇ ಅಳಬೇಡಿರಿ ಇನ್ನೊಂದು ದಿನ ತಾಳಿರಿ ನನ್ನ ಹತಭಾಗ್ಯ ಸಹೋದರರೇ ಕೇಳಿ ಕಡುವಿರೋಧಿಯಾದ ಕುಲಕಂಟಕ ದುರ್ಯೋಧನನ ತೊಂಬತ್ತೊಂಬತ್ತು ಜನತಮ್ಮಂದಿರ ಭಿನ್ನಮುಂಡದಿಂದ ನೀರಾಂಜನವನ್ನು ಮಾಡಿಸುವೆ ಕೌರವೇಶ್ವರ ನರಕದ ಭಯಂಕರ ಹಿಂಸೆಗಿಂತಲೂ ಕುರುಕ್ಷೇತ್ರದಲ್ಲಿ ಚಾಣಾಕ್ಷ ಶಕುನಿಯಿಂದ ನಿನಗಾಗುವ ಹಿಂಸೆಯು ಯಮಹಿಂಶೆಗಿಂತಲೂ ಭಯಂಕರವಾಗಿ ಪರಿಣಮಿಸುವದು.

ಕೊನೆಗೆ ತಾಯಿಯ ದಾರಣವಾದ ಕಣ್ಣೀರಿನ ಕಡಲಿನಲ್ಲಿತೊಯ್ದು ಗುರುಹಿರಿಯರ ರಕ್ತದಿಂದ ಕಳಂಕಿತನಾಗಿ ಪುತ್ರಶೋಕದಿಂದ ಪೀಡಿತನಾಗಿ ಸಾಯುವಾಗ ಬಾಯಲ್ಲಿ ಒಂದುಹನಿ ನೀರು ಬಿಡುವರಿಲ್ಲದೆ ನರಕದಮಾರ್ಗ ಹಿಡಿಯುವೆ.

ತಾಳ, ತ್ರಿತಾಳ ಪದ ರಾಗ, ಶಂಕರ

ಬಿಡದು ಪಾಪ । ಶಕುನಿಶಾಪ । ಕಡುಶೋಕದ ಮನತಾಪ । ಕಡೆಯೆ ನಾನು ಒಡಲಿನಕೋಪಾ । ಮಡುಗಟ್ಟುವೆ ರಕ್ತದಕೂಪ । ತಾಳಿ ತಾಳಿ ಕೃಶಸಹಿಸಿದ ತಾಪ ।

( ಪದವನ್ನು ಹೇಳುತ್ತಾ ಹೋಗುವನು. ನಂತರ ಗಾಂಧಾರಿ ಧೃತರಾಷ್ಟ್ರ ಪ್ರವೇಶಿಸುವರು. )

**ಗಾಂಧಾರಿ:**— ಈ ದಿವಸ ಬೆಳಗಿನಿಂದ ಕುಮಾರನ ಮುಖವನ್ನೇ ಕಾಣಲಿಲ್ಲಾ. ಕಾರಣವು ತಿಳಿಯಲಿಲ್ಲಾ.

**ಧೃತರಾಷ್ಟ್ರ:**— ಪ್ರಿಯತಮೆ ದುರ್ಯೋಧನನು ತಂದೆತಾಯಿಗಳ ಕೇಳಬೇಕಾಗುದಲ್ಲಾ ಎಂಬ ದುರಹಂಕಾರದಿಂದ ದೂರಾಗಿರುವನು.

**ಗಾಂಧಾರಿ:**—ಮುಂದೆ ಉಪಾಯ ?

**ದೃತರಾಷ್ಟ್ರ:**—ಅಪಾಯವಾಗದ ವಿನಃ ಉಪಾಯ ನಡೆಯುವದಿಲ್ಲಾ

**ಗಾಂಧಾರಿ:**—ಹಾಗಾದರೆ ಮಗನನ್ನು ಮೃತ್ಯುವಿನಬಾಯಿಗೆ ತುತ್ತು ಮಾಡುವಿರಾ ?

**ದೃತರಾಷ್ಟ್ರ:**—ಇಲ್ಲಾ ವಿಚಾರಕ್ಕಾಗಿ ವಿದುರನನ್ನು ಕಳಿಸಿರುವೆ. ಇಷ್ಟರಲ್ಲಿ ಬರಬಹುದು. ( ಇಷ್ಟರಲ್ಲಿ ದುರ್ಯೋಧನನು ವಿಧುರನೊಡನೆ ಪ್ರವೇಶಿಸಿ )

**ದುರ್ಯೋಧನ:**—ಅವ್ಮಾ ಕರೆಸಬಾರದಿದ್ದ ಕೆಲಸಕ್ಕೇಕೆಕರೆಸಿದಿರಿ.

**ಗಾಂಧಾರಿ:**—ಮಗೂ ನೀನು ನನ್ನ ಮಾತನ್ನು ಕೇಳುವದಿಲ್ಲವೋ ?

**ದುರ್ಯೋಧನ:**— ಇಲ್ಲವೆಂದು ನಾನು ಹೇಳಲಿಲ್ಲಾ !

**ಗಾಂಧಾರಿ:**—ನಾನು ನಿನ್ನ ತಾಯಿ.

**ದುರ್ಯೋಧನ:**—ಅಲ್ಲವೆಂದನೆ ?

**ಗಾಂಧಾರಿ:**- ನನ್ನ ಹೃದಯರಕ್ತವನ್ನು ಬಸಿದು ನಿನ್ನನ್ನು ಸಲಹಿರುವೆ.

**ದುರ್ಯೋಧನ:**- ನಿನ್ನ ರಕ್ತದ ಪ್ರತಿಮೆಯೇ ದುರ್ಯೋಧನನ ದೇಹ.

**ಗಾಂಧಾರಿ:** ನಿನ್ನ ಕಲ್ಯಾಣವೇ ದೇವರಲ್ಲಿ ನನ್ನ ಭಿಕ್ಷೆ.

**ದುರ್ಯೋಧನ:**— ಮಾತೃ ಹೃದಯವು ತಣ್ಣಗಿರಲೆಂಬುದೇ ನನ್ನ ಆಕಾಂಕ್ಷೆ.

**ಗಾಂಧಾರಿ:**— ಹಾಗಾದರೆ ತಾಯಿಯ ಮಾತನ್ನು ಕೇಳಬೇಕಲ್ಲವೆ ?

**ದುರ್ಯೋಧನ:**— ಪರಾಕ್ರಮಕ್ಕೆ ಸಲ್ಲುವ ಸಲಹೆಯಾದರೆ ಕೇಳಬಹುದು.

**ಗಾಂಧಾರಿ:**— ಲೋಕದಲ್ಲಿ ತಾಯಂದಿರು ಮಕ್ಕಳಿಗೆಂದಾದರೂ ಅಹಿತವನ್ನು ಬಯಸಬಲ್ಲರೆ.

**ದುರ್ಯೋಧನ:**— ಮುಂದಿನ ಸಂಗತಿಯನ್ನು ಹೇಳಿಬಿಡಮ್ಮಾ ಹೊತ್ತಾಯಿತು

**ಗಾಂಧಾರಿ:**—( ಪ್ರೀತಿಯಿಂದ ತಲೆಯ ಮೇಲೆ ಕೈಯಾಡಿಸಿ )ಮಗೂ ಸಮ್ರಾಟಾ ದುರ್ಯೋಧನ ಪಾಂಡವರೊಡನೆ ಸಂಧಿಗೆ ಸಮ್ಮತಿಸಿ ಸುಖಿಯಾಗಿಬಾಳು.

**ದುರ್ಯೋಧನ:**— ಅದೊಂದನ್ನು ಬಿಟ್ಟು ಉಳಿದವಿಷಯವೇನಿದ್ದರೂ ಹೇಳು ಶಿರಸಾವಹಿಸಿ ನಡೆಸುವೆ.

**ಗಾಂಧಾರಿ:**— ಹಾನಿಯಾಗದಿದ್ದ ವಿಷಯಗಳನ್ನು ಹೇಳಿ ಪ್ರಯೋಜನವೇನು.

**ದುರ್ಯೋಧನ:**— ಕ್ಷಾತ್ರಧರ್ಮಕ್ಕೆ ಸಲ್ಲದ ಶಬ್ದಗಳನ್ನು ಕೇಳಿ ಉಪಯೋಗವೇನು.

**ಗಾಂಧಾರಿ:**—( ಬೇಸರದಿಂದ ) ಹಾಗಾದರೆ ನನ್ನ ಮಾತನ್ನು ಕೇಳುವದಿಲ್ಲ.

**ದುರ್ಯೋಧನ:**— ಇಲ್ಲಾ .

**ಗಾಂಧಾರಿ:—** ಮೃತ್ಯುವು ನಿನಗೆ ತಪ್ಪಿದ್ದಲ್ಲ.

**ದುರ್ಯೋಧನ:—** ಅದನ್ನು ನೀನು ಹೇಳಬೇಕಾದುದಿಲ್ಲಾ

( ಸಿಟ್ಟಿನಿಂದ **ಹೋಗತೊಡಗುವನು** )

**ಗಾಂಧಾರಿ:** –( ಅನಿವಾರ ಮಾತೃ ಪ್ರೇಮದಿಂದ ) ಮಗೂ ತಾಯಿಯಂತಹ ಬಂಧುವು ಹಿತೈಷಿಯು ಅಂತಃಕರುಣಿಯು ಬ್ರಹ್ಮಾಂಡವನ್ನು ಬುಡಮೇಲಾಗಿ ಹುಡುಕಿದರೂ ದೊರಕುವದು ಕಷ್ಟ. ತಾಯಿಯ ಪ್ರೇಮವು ಸಾಗರದಂತೆ ಅಪಾರವಾಗಿರುವದು. ದುರ್ಯೋಧನಾ ಸಾಗರದನೆಲೆಯನ್ನು ಕಾಣಬಹುದು. ನಕ್ಷತ್ರಗಳ ಎಣಿಕೆ ಮಾಡಬಹುದು. ಅಶ್ವದ ನೆಲೆಯನ್ನೂ ಕಂಡು ಹಿಡಿಯಬಹುದು. ಆದರೆ ಮಾತೃ ಹೃದಯದ ಪವಿತ್ರ ಪ್ರೇಮವನ್ನು ಕಂಡುಹಿಡಿಯುವದು ಸೃಷ್ಟಿಕರ್ತನಿಗೂ ಸಾಧ್ಯವಿಲ್ಲಾ ಆದ್ದರಿಂದ ನನ್ನ ಮಾತನ್ನು ಕೇಳು.

**ದುರ್ಯೋಧನ:—** ಆಯಿತೋ ಬರುವೆ ( ಎಂದು ತಿರಸ್ಕಾರದಿಂದ ಹೋಗುವನು. ಗಾಂಧಾರಿಯು ಹೋದಮಾರ್ಗವನ್ನೇ ನೋಡುತ್ತಾ )

**ಗಾಂಧಾರಿ:—** ಹೋಗು ಮೃತ್ಯುವು ಕಾಳಸರ್ಪರೂಪದಿಂದ ಬೆನ್ನಟ್ಟಿರುವಾಗ ಮಾನ್ಯರ ಮಾತುಗಳು ಶೂನ್ಯವಾಗಿ ತೋರುವದು ಸಹಜ

ತಾಳ, ತ್ರಿತಾಳ ॥ ಪದ ॥ ರಾಗ, ಜೀವನಪುರಿ

ವಿಧಿಬರಹ ಮೀರುವದಾರಿಂದ । ಸಾಧ್ಯವಾದುದೆ ಸಾವಿನಳವನು । ತಿಳಿಯಲು ಮಾಯಾಪಾರವಾರಿಯ ॥ ಅಂತ ಕಾಂತಕನ ಪಂಥವಗೆಲೆದಿಹ । ನೆಂತೊ ಬಿಡುವನೋ ನಿನ್ನಯ ಶಿರವ ॥ ( ಹೋಗುವಳು )

( ರಸ್ತಾಪರದೆಯ ಮುಂದೆ ಕೈಯಲ್ಲಿ ದೊಡ್ಡದೊಂದು ಸವಟು ಹಿಡಿದುಕೊಂಡು ಪ್ರವೇಶಿಸಿ )

**ಭೀಮ:—** ಧಿಃಕ್ಕಾರ. ಧಿಕ್ಕಾರವಿರಲಿ ಪಾಂಡವ ಜನ್ಮಕ್ಕೆ, ಲೋಕದಲ್ಲಿ ಪಾಂಡವರಿಗೆ ಕೃಷ್ಣಪರಮಾತ್ಮನ ಬಲವಿದೆಯೆಂದೂ ಜಗದೇಕ ವೀರರೆಂದೂ ಹೊಗಳಿಸಿಕೊಳ್ಳುವ ನಾವು ಈಗ ಪರರ ಮನೆಯಲ್ಲಿ ಗುಲಾಮರಾಗಿ ಕೇವಲ ಅವರ ಪಾದಸೇವಕರಂತೆ ದಾಸ್ಯತ್ವದಲ್ಲಿ ಬಿದ್ದು ಅವರು ಹಾಕಿದ ಅನ್ನವನ್ನು ತಿರುಕರಂತೆ ತಿನ್ನುತ್ತಾ ಕಾಲಕಳೆಯುವ ನಾವು ಜಗದೇಕ ವೀರರೇ ಅಲ್ಲಾ ಜಗದೇಕ ಹೇಡಿಗಳು ಇಂತಹದರಲ್ಲಿ ದ್ರೌಪದಿಗೆ ಆ ಸ್ವಜನದ್ರೋಹಿಯಾದ

ಕೀಚಕನ ಕಾಟಾ ಇವಳೇನು ಎಷ್ಟು ಸುಂದರಿಯಾಗಿದ್ದರೂ ದಾಸಿ. ಅಂದಮೇಲೆ ಬಲಾತ್ಕಾರಮಾಡಿದರೆ ಕೇಳುವ ಗಂಡುಗಲಿಯೊಬ್ಬನು ಬೇಕಲ್ಲಾ ವುಂ ಹೂ ಯಾರೂಇಲ್ಲಾ ನಾನೇನಾನು ಅವಳೇಆವಳು ಎಂಬ ಉದಾಶೀನ ಭಾವದಿಂದ ಅವಳಮೇಲೆ ಬಲಾತ್ಕಾರಕ್ಕೆ ಹೋಗಿದ್ದನಂತೆ ಅದನ್ನು ಕಂಡು ದ್ರೌಪದಿಯು ಸಂತಾಪದಿಂದ ಬಂದು ನನಗೆ ಹೇಳಿದ್ದೊಂದೇ ಅವಕಾಶ. ಕಿಡಿಗೇಡಿಯಾದ ಕೀಚಕನ ಅವತಾರವನ್ನು ಮುಗಿಸಿಯೇ ಬಿಟ್ಟೆ ಅಂತೂ ಒಂದು ಜಾಲೆಯ ಮಾರವನ್ನು ಕಡಿದೇ ಬಿಟ್ಟೆ ಆದರೆ ಕಚ್ಚುವಪುರವನ್ನು ಕೊಚ್ಚಿ ಹಾಕುವ ಭರದಲ್ಲಿ ನನ್ನ ಪಾಂಚಾಲಿಯನ್ನು ಮಾತಾಡಿಸಲೇಯಿಲ್ಲಾ ಎಂದಿಗೆ ಆ ಸುದಿನ ಬರುವದೋ ಎಂದು ಕಾಯುತ್ತಲಿಸ್ದೆ ಅನಾಯಾಸವಾಗಿ ಈ ದಿವಸ ಹೆಂಗಸರಿಗೆ ಗರ್ಭಿಣಿಯುಕಾಲಕ್ಕೆ ಹತ್ತುವಬಯಕೆಯಂತೆ ನಮ್ಮ ಯುವರಾಜನಿಗೆ ಪಂಚಪಕ್ವಾನ್ನವನ್ನು ವಿಶ್ರಾಂತಿಮಂದಿರದಲ್ಲಿ ಉಣ್ಣಬೇಕೆಂಬ ಅಪೇಕ್ಷೆಯಾಗಿದೆಯಂತೆ ಅದಕ್ಕೆ ಊಟಕ್ಕೆ ಇಲ್ಲಿಗೇ ತರಬೇಕೆಂದು ಹೇಳಿಕಳುಹಿಸಿದನು ದ್ರೌಪದಿಯನ್ನು ನೋಡುವದಕ್ಕೆ ಸಮಯಸಿಕ್ಕಿತೆಂದು ಹಿಗ್ಗಿ ಅವಸರದಲ್ಲಿ ಕೈಯಲ್ಲಿದ್ದ ಸವಟನ್ನು ಮರೆತು ತಂದೇಬಿಟ್ಟೆ ಇದೊಂದುಬಗೆಯ ಅನುಕೂಲವೇ ಆಯಿತು. ಆದರೆ ಪಾಂಚಾಲಿ ಅತ್ತಿತ್ತ ಹುಡುಕುತ್ತಾ ಮುಂದೆಬಂದು ನೋಡಿ ) ಓಹೋ ನೆನಿಸಿದಪರ ಮನಸಿನಲ್ಲಿ ಎಂಬಂತೆ ಪಾಂಡವರ ಭಾಗ್ಯಲಕ್ಷ್ಮಿಯು ಬಂದೇಬಿಟ್ಟಳು. (ಆತುರದಿಂದಾ) ದ್ರೌಪದೀ(ಎಂದು ಗಟ್ಟಿಯಾಗಿ ಕೂಗುವನು. ದ್ರೌಪದಿಯು ಪೂಮಾಲೆಯನ್ನು ಹಿಡಿದುಕೊಂಡು ಬರುವಳು.)

**ಭೀಮ:**—( ಪುನಃ ) ದ್ರೌಪದೀ.

**ದ್ರೌಪದಿ:**—( ಕುಟಿಯನ್ನುಕಚ್ಚಿ ) ದೇವಾ ಇದೇನು ಹೆಸರಿನಿಂದಲೇ ಕರೆಯುವಿರಲ್ಲಾ !

**ಭೀಮ:**—ಹೆಸರಿನ ಒಡೆಯನು ಹೆಸರಿನಿಂದಲೇ ಕರೆಯಬೇಕಲ್ಲವೆ ?

**ದ್ರೌಪದಿ:**—ಇದು ಅವಿಚಾರವಲ್ಲವೆ ?

**ಭೀಮ:**—ಭೀಮನ ಆಯುಷ್ಯೇ ಅದರಲ್ಲಿ ಹೋಗಿರುವದು.

**ದ್ರೌಪದಿ:**—ನಿಮ್ಮ ಹೆಸರನ್ನು ಸಹ ಉಚ್ಚರಿಸುವಿರಲ್ಲಾ.

ಭೀಮ:—ಯಾವ ಹೆಸರಿನ ಅಧಿಕಾರವು ಯಾವ ಹೆಸರಿಗಿರುವದೋ ಅದು ಬರತಕ್ಕದ್ದೇ.

ದ್ರೌಪದೀ:—( ಹೆದರಿಕೆಯಿಂದ ) ದೇವಾ ಇದು ಪ್ರಮಾದವಲ್ಲವೇ ?

ಭೀಮ:—ಕೀಚಕನನ್ನು ಕೊಂದದ್ದೇ ಪ್ರಮಾದ ಇಲ್ಲಿಗೆ ಬಂದದ್ದೇ ಆಶ್ಚರ್ಯ ಭಯಪಡುವುದೇಕೆ ?

ದ್ರೌಪದಿ:—ಅಂದರೆ ಅಜ್ಞಾತವಾಸದ ಅವಧಿ ?

ಭೀಮ:—ಇನ್ನೆಂಟುದಿನಗಳು ಮಾತ್ರ.

ದ್ರೌಪದಿ:—( ಧೈರ್ಯದಿಂದ ) ಅದು ಹೇಗೆ ?

ಭೀಮ:—ನಮ್ಮ ಕುಲಗುರುಗಳಾದ ಧೌಮ್ಯರು ಚಾಂದ್ರಮಾಸಗಣನೆಯಿಂದ—ಇನ್ನೆಂಟುದಿನಗಳು ಮಾತ್ರ ಗುಪ್ತವಾಗಿರಬೇಕೆಂದು ಹೇಳಿರುವರು

ದ್ರೌಪದಿ:—ಅಲ್ಲಿಯವರೆಗಾದರೂ

ಭೀಮ:—ಎಚ್ಚರಿಕೆಯಿಂದಲೇ ಇರುವೆ.

ದ್ರೌಪದಿ:—ಅದಕ್ಕಾಗಿಯೇ ಹೇಳಿದೆ. ನೀವು ಬಹು

ಭೀಮ:—ಹುಂಬನೆಂದು ನಿನ್ನ ಅಭಿಪ್ರಾಯವೋ ?

ದ್ರೌಪದಿ:—( ನಕ್ಕು ) ಅದೇನಿಲ್ಲಾ.

ಭೀಮ:—ಹಾಗಾದರೆ ಇನ್ನು ನಿನಗೆ ನಿಶ್ಚಿಂತೆ.

ದ್ರೌಪದಿ:—ಎಲ್ಲಿಂದ ಬರಬೇಕು.

ಭೀಮ:—ಏಕೆ ?

ದ್ರೌಪದಿ:—ಆ ಕೇಡಿಗರು ನಮ್ಮ ಅಜ್ಞಾತವಾಸದ ಅವಧಿಯ ತಪ್ಪನ್ನೇ ನಿರೀಕ್ಷಿಸುತ್ತಿರುವರು.

ಭೀಮ:—ತಪ್ಪನ್ನು ತಪ್ಪಿಸಿಕೊಳ್ಳುವದು ನಮ್ಮ ಕೈಯಲ್ಲಿದೆ.

ದ್ರೌಪದಿ:—ಆಷ್ಟಾದರಾಯಿತು.

ಭೀಮ:—ಸರಿ ಹಾಗಾದರೆ ಇನ್ನೇನು ?

ದ್ರೌಪದಿ:— ಇನ್ನೊಂದು ಗಂಡಾಂತರವು ಬಂದೊದಗಿರುವುದು

ಭೀಮ:—ಅದಾವುದು ?

ದ್ರೌಪದಿ:—ಸುಧೇಷ್ಣಾ ದೇವಿಯವರು ವೊನ್ನೆ ನನ್ನನ್ನು ಕರೆದು ಏನೆ ಕರಿಗಾಲಿನವಳೇ ನೀನು ಬಂದಾಗಿನಿಂದ ನಮ್ಮ ಅರಮನೆಯಲ್ಲಿ ಇಲ್ಲದ ಅನಾಹುತಗಳಾಗಹತ್ತಿವೆ. ಆದ್ದರಿಂದ ಮತ್ತೆಲ್ಲಿಗಾದರೂ ಹೋಗೆಂದು ಅಜ್ಞಾಪಿಸಿರುವರು.

ಭೀಮ:—ಏನಾದರೂ ವಿನಯದಿಂದ ಸ್ವಲ್ಪ

ದ್ರೌಪದಿ:—ಬೇಡಿಕೊಂಡೆ.

ಭೀಮ:— ಅದಕ್ಕೆ ಉತ್ತರ.

ದ್ರೌಪದಿ: — ಕೊಟ್ಟರು.

ಭೀಮ:—ಏನೆಂದು ?

ದ್ರೌಪದಿ:—ಇನ್ನೆಂಟುದಿನ ಮಾತ್ರ ಇರಬಹುದೆಂದು ?

ಭೀಮ:—ಅಷ್ಟಾದರೆಸಾಕು ಗೆದ್ದೆವು. ದೇವಿದ್ರೌಪದಿ ಅಜ್ಞಾತವಾಸವನ್ನು ಗೆದ್ದೆವು ( ಎಂದು ಎರಡೂಕೈ ಮೇಲೆ ಮಾಡುವನು )

ದ್ರೌಪದಿ:—ಹಾಂಹಾಂ ಸ್ವಲ್ಪ ಮೆತ್ತಗೆಮಾತಾಡಿರಿ

ಭೀಮ:—ಏಕೆ ?

ದ್ರೌಪದಿ:—ಆಗಲೇ ಹೇಳಿದ್ದನ್ನು ಮರೆತೇಬಿಟ್ಟಿರಲ್ಲಾ ?

ಭೀಮ:—ಓಹೋ ಹೌದು ನೀನು ಹೇಳಿದ್ದು ಯುಕ್ತ ದೇವೀನಿನ್ನಂತಹ ಸೂಜ್ಞಳನ್ನು ಪಡೆದ ಪಾಂಡವರ ಪುಣ್ಯವೇ ಪುಣ್ಯ. ಏನುಮಾಡಲಿ ನೀಚ ಕೀಚಕನ ರಕ್ತದಿಂದತೊಳೆದ ಈ ನನ್ನ ಹಸ್ತಗಳಿಂದ ಕಷ್ಟಪೀಡಿತಳಾದ ಈ ನಿನ್ನ ದೇಹವನ್ನು ಪ್ರೇಮದಿಂದ ಸಾವರಿಸಿದ್ದರೆ ಸಾರ್ಥಕವಾಗುತ್ತಿತ್ತು— ಅಂತಹ ಪುಣ್ಯವು—ಭೀಮನಿಗೆ ಲಭಿಸಲಿಲ್ಲಾ—ಪುನಃ ವಿರಾಟರಾಯನ ಅಡಿಗೆಮನೆಯ ಮುಸುರೆ ತೊಳೆಯುವದರಲ್ಲಿ ತೊಡಗಿದವು.

( ಎಂದು ನಿಟ್ಟುಸಿರು ಬಿಡುವನು. )

ದ್ರೌಪದಿ:—ದೇವಾ ಅಲ್ಲಿ ಯಾರೋ ಬರುವಂತಿದೆ—( ನೋಡಿ ) ಒಹೋ ಇವಳು ಅರಮನೆಯ ಚೇಟಿ ದುಶ್ಶೀಲೆ ಶಬ್ದ ಜೋಡಿಸುವದರಲ್ಲಿ ಬಹು ನಿಪುಣೆ ನಾವಿಬ್ಬರಿದ್ದದ್ದನ್ನು ನೋಡಿ—ಪಾಪದ ಕೋಟಿಯನ್ನು ಕಟ್ಟಿ ಏನಾದರೊಂದು ಮಾತಾಡಿಬಿಟ್ಟಾಳು—ಆ ಮೇಲೆ ಪಾಪ ಬಡಪ್ರಾಣಿಯು ನಿಮ್ಮ ಕೋಪಾಗ್ನಿಯಲ್ಲಿ ಬೂದಿಯಾಗಬೇಕಾದೀತು—ಸ್ವಲ್ಪ ಮರೆಯಾಗಿರಿ

ಭೀಮ:—( ಗಟ್ಟಿಯಾಗಿ ) ಬರಲಿಬಿಡು ನೋಡೋಣ.

ದುಶ್ಶೀಲೆ:— (ಬಂದು) ಸೈರಂಧ್ರಿ ಸೈರಂಧ್ರಿ ಯಾವಕೆಲಸದಲ್ಲಿರುವೆ (ಭೀಮನನ್ನು ನೋಡಿ) ಇವನಾರು(ಗುರ್ತಿಸಿ)ಓಹೊ ನಮ್ಮ ಅಡಿಗೆಯ ಬಾಣಸಿಗ ಇವನ ಸಂಗಡ ಏತರಮಾತು ಹಿಂದಾದ ಅವಮಾನವು ಸಾಲದೇನು.

ದ್ರೌಪದಿ:—ವಿಶೇಷವೇನಿಲ್ಲತಾಯಿ—ಈ ಮಲ್ಲಿಗೆ ಹೂವಿನ ಮಾಲೆಯು ತೊಡಕು ಬಿದ್ದಿತ್ತು ಎಷ್ಟುಪ್ರಯತ್ನಬಟ್ಟರೂ ಸರಿಯಾಗಲಿಲ್ಲಾ—ಅಷ್ಟರಲ್ಲಿ ಇವರು ಬಂದು ನಾನುಬಿಡಿಸಿಕೊಡುತ್ತೇನೆ ಇಲ್ಲಿಕೊಡು ಎಂದು ಹೇಳಿದರು— ದೇಹದಪ್ಪಾಗಿದ್ದರೂ ಬುದ್ಧಿ ಸೂಕ್ಷ್ಮವಿರಬಹುದೆಂದು ಕೊಟ್ಟೆ—

ದುಶ್ಶಿಲಾ: — ಕೂಡಲೇ ಬಿಡಿಸಿಬಿಟ್ಟಾ—ಈ ದೀಪಮಾಲೆಯ ಕಂಟದ ಬೆರಳಿನಭೂಲೋಕದ ಮನುಷ್ಯ.

ಭೀಮ:— ಏಕೆ ಸ್ವರ್ಗಲೋಕ ನೋಡುವಹಾಗಿದ್ದರೆ ಹೇಳಿ—ಕಳಿಸಿ ಬಿಡುತ್ತೇನೆ.

ದುಶ್ಶೀಲಾ:— ಅದೇನಿಲ್ಲ ಧೂಮಕೇತಪ್ಪಾ.

ಭೀಮ:— ( ದೊಡ್ಡ ಧ್ವನಿಯಿಂದ ಕೆಮ್ಮುವನು ) ( ದುಶ್ಶೀಲೆಯು ಹಾರಿಬಿದ್ದು )

ದುಶ್ಶೀಲೆ:—ಮುಂಗಾರಿಯಸಿಡ್ಲು ನಿನ್ನ ಬಾಯಲ್ಲೇನಪ್ಪಾಹುಟ್ಟಿದ್ದು.

ಭೀಮ:— ಏಕೆ ದುಶ್ಶೀಲಮ್ಮಾ.

ದುಶ್ಶೀಲೆ:— (ಅದೇಸ್ವರದಲ್ಲಿ) ಏಕಿಲ್ಲ ಮಹಾರಾಯಾ.

ಭೀಮ:— ಚೇಷ್ಟೆಮಾಡುವೆಯೇನು.

ದುಶ್ಶೀಲಾ:— ಯಾರಕೂಡ ಮಹಾರಾಯಾ.

ಭೀಮ:— ನನ್ನ ಕೂಡ.

ದುಶ್ಶೀಲಾ:— ಇನ್ನೂ ನಾಲ್ವತ್ತು ಬದುಕಬೇಕಾಗಿದೆ.

ಭೀಮ:— ಅಂದರೆ ನಾನಂತಹ ಭೀಕರ್ ಮನುಷ್ಯನೇ.

ದುಶ್ಶೀಲಾ:— ಯಾರು ಹೇಳಿದರು, ಅವರಿಗೆಲ್ಲೋ ಹುಚ್ಚು ನಿನ್ನಂತ ಸೂಕ್ಷ್ಮಪ್ರಾಣಿಯನ್ನು ನೋಡಿದ್ದು ಇದೇ ಮೊದಲು. ಇಂತಹ ಸೂಕ್ಷ್ಮದೇಹ ದವರು ಊರಿಗೆ ನಾಲ್ಕಾರು ಜನಗಳಿದ್ದರೆ ಸ್ವರಾಜ್ಯಕ್ಕೆ ಮದ್ದು ಗುಂಡುಗಳೇ ಬೇಡಾ ವೈರಿಗಳು ತಾವಾಗಿಯೇ ರಾಜ್ಯವನ್ನೊಪ್ಪಿಸಿ ಕೈಮುಗಿದು ಕಾಯಿವಡಿಸಿ ಕಾಲಿಗೆಬಿದ್ದು ಹೇಳದೇ ಹೋಗುವರು.

ದ್ರೌಪದಿ:— ಇನ್ನು ಹೊರಡಬಹುದು.

ಭೀಮ:— ಸಹಾಯಕ್ಕೆ.

ದ್ರೌಪದಿ:— ದುಶ್ಶೀಲಮ್ಮನಿದ್ದಾಳೆ.

ಭೀಮ:— ದುಶ್ಶೀಲಮ್ಮಾ— ಹಾಗಾದರೆ ಹೊರಡಲೋ ?

ದುಶ್ಶೀಲೆ:— ಹೊರಡು ಮಹಾರಾಯಾ ತಿರುಗಿ ನೋಡಬೇಡ— ಕನಸ್ಸಿನಲ್ಲಿ ಬಂದೀ. ನಮಸ್ತೆ. ( ಭೀಮನು ಭರದಿಂದ ಕಾಲುಚಪ್ಪರಿಸುತ್ತ ಹೋಗುವನು. )

ಸ್ವಲ್ಪು ಮೆಲ್ಲಗೆಹೋಗು ಮಹಾರಾಯ— ಭೂಕಂಪವಾದೀತು. (ಭೀಮನು ಹೋಗುವನು.)

ದ್ರೌಪದಿ:— ದುಶ್ಶೀಲಾದೇವಿ ಈ ಮಾತಿಗ ನೀನು ಸ್ವಲ್ಪು ಸಹಾಯ

ದುಶ್ಶೀಲಾ:— ನಾನು ಸಹಾಯಮಾಡುವದಕ್ಕಲ್ಲಾ ಬಂದಿರುವದು. ಯುವರಾಜರು ಈ ದಿವಸ— ಸಂಗೀತ ಪರೀಕ್ಷೆಗಾಗಿ ಶಾಲೆಯಕಡೆಗೆ ಬರುವರಿದ್ದಾರೆ. ಅಷ್ಟರೊಳಗಾಗಿ ಪಾರಿಜಾತ ಮಾಲೆಯನ್ನು ಮುಗಿಸಿಟ್ಟಿರಬೇಕು.

ಪಾಂಚಾಲಿ:— ಈ ಹಾಳಾದ ತೊಡಕು ಬಿಡಬೇಕಾದರೆ, ಇನ್ನೂ ಎಷ್ಟು ದಿನಗಳು ಕಳೆಯಬೇಕೊ!

ದುಶ್ಶೀಲೆ:— ದ್ರೌಪದಿ ಜೋಕೆ ನಾನು ಬರುವೆ.

**ಪಾಂಚಾಲಿ:—** ಬಲಶಾಲಿಗಳಾದ ಭೀಮದೇವರಿದ್ದರೆ ನನ್ನ ಸಂಕಟವು—ನಿವಾರಣೆಯಾಗುತ್ತಿತ್ತೇ—ಬರುವ ಸಪ್ತಮಿಯ ಮಿತಿಗೆ ನಿಮ್ಮ ಅಜ್ಞಾತವಾಸವು ಮುಗಿಯುವದೆಂದು—ಕುಲಗುರುಗಳು ಗುಪ್ತಸಂದೇಶವನ್ನು ಕಳಿಸಿರುವರು ಧರ್ಮಮೂರುತಿಗೆ ಅದನ್ನು ಅವರು ಅರ್ಜುನ ದೇವನಿಗೆ ತಿಳಿಸಲು ಹೇಳಿದ್ದರು ( ಮುಂದೆ ನೋಡಿ ಅಗೋ ಅವರೇ ಬಂದರು.

**ಅರ್ಜುನ:**— ( ಪ್ರವೇಶಿಸಿ ) ಪಾಂಚಾಲಿಗೆ ಅರ್ಜುನನ ಪ್ರಣಾಮಗಳು

( ನಮಸ್ಕರಿಸುವನು )

**ದ್ರೌಪದಿ:—** ಪತಿಗಳ ಸಹಾಯದಿಂದ ಮುಕ್ತಳಾದ ನಾನು ನಿಮಗ ನಮಸ್ಕಾರ ಮಾಡಬೇಕಲ್ಲವೇ ? ( ನಮಸ್ಕರಿಸುವಳು )

**ಅರ್ಜುನ:—** ಪಾಂಚಾಲಿ. ನೀನು ಮುಕ್ತಳಾದದ್ದು—**ಪತಿಗಳ** ಸಹಾಯದಿಂದಲ್ಲ. ಪ್ರತಿವ್ರತಾ ಧರ್ಮದ ಸಹಾಯದಿಂದ,

**ಪಾಂಚಾಲಿ:—** ಇರ್ಲಿ ಮೊದಲು ಧರ್ಮಮೂರುತಿಯ ಸಂದೇಶವನ್ನು ತಿಳಿಸುತ್ತೇನೆ.

**ಅರ್ಜುನ:—**( ಹರುಷದಿಂದ ) ಏನು ಜಗತ್ಪಾವನ ಪರಮಪೂಜ್ಯ ಮಹಾತ್ಮನ ಸಂದೇಶವನ್ನೇ—ಸರಿ. ಹಾಗಾದರೆ ಇನ್ನೇನು ಶುಭದಿನಗಳನ್ನು ಕಂಡಂತೆಯೇ

**ಪಾಂಚಾಲಿ:—** ಇಲ್ಲಾ ಇನ್ನೂ ಅವಕಾಶವುಂಟು

**ಅರ್ಜುನ:** – ಹಾಗಾದರೆ ಯಾವಮಿತಿಗೆ.

**ಪಾಂಚಾಲಿ:—** ಬರುವ ಸಪ್ತಮೀ ಮಿತಿಗೆ ( ದುಃಖದಿಂದ ) ಆರ್ಯಾ ನಿಜವಾಗಿ ನಾವು ಈ ಸಂಕಟದಿಂದ ಪಾರಾಗಬಹುದೆ.

**ಅರ್ಜುನ:—** ಇದೇನುದೇವಿ. ಭಾರತಾಂಗನೆಯಾದ ನೀನು ಹಕ್ಕಿನ ಸ್ವರಾಜ್ಯವನ್ನು ಮರುಳಿ ಸಂಪಾದಿಸಲು ಪಡಬಾರದ ಕಷ್ಟನಷ್ಟಗಳನ್ನು ಅನುಭವಿಸಿ ರಾಜ್ಯವು ಮರಳಿಬರುವಾಗ ಶೋಕಿಸುವದೆ.

**ಪಾಂಚಾಲಿ:—** ದೇವಾ ನಾನು ದುಃಖಪಡುವದು ನನಗಲ್ಲಾ ಜಗದೇಕವೀರರೂ ಭಾರತಪುತ್ರರೂ ಆದ ನೀವು ಧರಿಸಿರುವ ಈ ಹೀನವೇಷವನ್ನು ಕಂಡು.

**ಅರ್ಜುನ:—** ದೇವಿ ಜಗದ್ವಂದ್ಯನಾದ ಧರ್ಮವೂರುತಿಯು ಭಾರತದ ಪ್ರಜಗಳ ಹಿತಕ್ಕಾಗಿ. ಸ್ವರಾಜ್ಯಸಂಪಾದನೆಗಾಗಿ. ತಿರುಕರಂತೆ ಮೈ ಮೇಲೆ ಬಟ್ಟೆ ಇಲ್ಲದೆ ನೋಡುವವರಿಗೆ ಹುಚ್ಚನಂತೆ ಕಾಣುತ್ತಾ ಕಷ್ಟನಷ್ಟಗಳನ್ನು ಸೈರಿಸುತ್ತಾ ಅಹಿಂಸೆ ಎಂಬ ಗುಂಡನ್ನು ಗುರಿಯಿಟ್ಟುಕೊಂಡು ಇದರಿಂದಲೇ ರಾಜ್ಯತೆಗೆದುಕೊಳ್ಳುವೆನೆಂಬ ಭರವಸೆಯಿಂದ ಶಾಂತನಾಗಿ ಸುಮ್ಮನಿರುವಾಗ ನಮ್ಮಗಳಪಾಡೇನು. ದೇವಿ ಇದೆಲ್ಲವೂ ನಾಟಕದ ನಟನಂತಿರುವದು.

**ಪಾಂಚಾಲಿ: —** ನಟನಿಗೂ ಪಾಂಡವರಿಗೂ ಸಂಬಂಧವೇನು.

**ಅರ್ಜುನ:—** ಹಾಗಲ್ಲಾ ನಟನು ಒಂದುಕ್ಷಣದಲ್ಲಿ ರಾಜನಾಗಿ ಆನಂದದಿಂದಿರುವನು. ಮತ್ತೊಂದು ಕ್ಷಣದಲ್ಲಿ ಅದೇ ನಟನು ಸೇವಕನಾಗುವನು.

**ದ್ರೌಪದಿ: —** ನಿಜ.

**ಅರ್ಜುನ:—** ಅಂದಮೇಲೆ ಆ ನಟನ ಸೇವಕನ ವೇಷವನ್ನು ಕಂಡು ಏಕೆವಿಷಾದಿಸಬೇಕು ? ಅದರಂತೆ ಅಜ್ಞಾತವಾಸವೆಂಬ ನಾಟಕದಲ್ಲಿ ನಾವು ಧರಿಸಿರುವ ವೇಷವನ್ನು ಕಂಡು ಏಕೆವ್ಯಸನಪಡಬೇಕು ? ನಾಟಕವು ಮುಗಿಯುತ್ತಲೇ ನಟನು ತನ್ನ ನಿಜಸ್ಥಿತಿಯನ್ನು ಕಾಣುವಂತೆ ನಾವಾದರೂ ಅಜ್ಞಾತವಾಸವೆಂಬ ನಾಟಕವು ಮುಗಿಯುತ್ತಲೇ ನಮ್ಮ ನಿಜಸ್ಥಿತಿಯನ್ನು ಕಂಡೇ ತೀರುವೆವು.

**ದುಶ್ಶೀಲಾ;—** ಸೈರಂಧ್ರಿ.

**ಪಾಂಚಾಲಿ:—** ದೇವಾ ನೀವು ಹೊರಡಿ.

**ಅರ್ಜುನ:—** ಪಾಂಚಾಲಿ ನೀನು ದಾಸಿಯ ಸಂಗಡನಡೆ. ನಾನು ಬರುತ್ತೇನೆ.

( ಪಾಂಚಾಲಿಯು ಹೋಗುವಳು. ನಂತರಾ, )

**ಅರ್ಜುನ;—** ದೇವಾ ಪಾಂಡವರ ಪ್ರಾಣಾಧಾರನಾದ ನೀನು. ಅವರ ಸತ್ವವನ್ನು ಪರೀಕ್ಷಿಸುವದಕ್ಕಾಗಿ, ಈ ಕಪಟನಾಟಕವನ್ನು ಹೂಡಿರುವೆಯಲ್ಲವೆ. ಪ್ರಭೋ ನಿನ್ನ ವರದ ಹಸ್ತವು ಪಾಂಡವರ ತಲೆಯಮೇಲಿರುವವರೆಗೆ ಜಯವಲ್ಲದೆ–ಅಪಜಯವೆಲ್ಲಿಂದಬರಬೇಕು.

ತಾಳ ಏಕ್ತಾ | ಪದ | ರಾಗ ಬಸಂತ
--- | --- | ---

ಪುಣ್ಯಮೂರುತಿಯ ದಯದಿ। ನನ್ನ ರಾಜ್ಯವನ್ನು ಪಡೆದು। ಬನ್ನಪಡುವ ರೆಮ್ಮ ಪ್ರಜನಕೆ ಶಾಂತಿಸುಖಕೊಡುವೆಬೇಗ। ಸಂತೋಷವ ಸತತ ಕೊಡುವ। ದೇವದೇವನೆನಿಸಿ ಮೆರೆವ। ಪಾರವಾದ ನಿನ್ನಮಹಿಮೆ। ಪಾಮರರಿಗೆ ತಿಳಿಯ ಲಳವೆ।

( ಪದವನ್ನು ಅನ್ನುತ್ತಾ ಹೋಗುವನು )

## ೩ನೇ ಪ್ರವೇಶ

( ಪಾಂಚಾಲಿ ರಸ್ತಾಪರದೆಯ ಮುಂದೆ ಬಂದು )

**ಪಾಂಚಾಲಿಃ**—ದೇವ ಯದುನಂದನ-ದೇವಕೀತನಯ ನಿನ್ನ ಪಾಂಡವರ-ಯೋಗಕ್ಷೇಮ ಚಿಂತನೆಯು ನಿನ್ನದಲ್ಲವೆ ಪ್ರಭೋ ನೀನು ಮನುಷ್ಯನಾಗಿ ಜನ್ಮಿಸಿದ್ದರೂ ನಿನ್ನ ವ್ಯಾಪಾರವನ್ನು ಕಂಡುಹಿಡಿಯಲು ಯಾರಿಂದಲೂ ಸಾಧ್ಯವಿಲ್ಲಾ. ಪ್ರಭೋ ನಿನಗೆ ಇವನು ದ್ವೇಷಿಯು. ಮತ್ತೊಬ್ಬನು ಪ್ರಿಯನೆಂಬ ಭೇದಭಾವವಿಲ್ಲ ನೀನು ಕೆಲವರಿಗೆ ತೋರಿಸತಕ್ಕ ನಿಗ್ರಹವು ಕೂಡಾ—ಕೊನೆಗೆ ಪರಾನುಗ್ರಹರೂಪವಾಗಿ ಮುಕ್ತಿಯನ್ನೇ ಕೈಗೂಡಿಸುವದು— ಓ ವಿಶ್ವಾತ್ಮಾ, ನೀನು ಕರ್ಮಸಂಬಂಧವಿಲ್ಲದವನು. ಕರ್ಮಾಧೀನವಾದ ಜನ್ಮವಿಲ್ಲದವನು ತಿರ್ಯಕ್ಕುಗಳಲ್ಲಿಯೂ ಋಷಿಗಳಲ್ಲಿಯೂ ಮಾನವರಲ್ಲಿಯೂ ಬೇರೆ ಬೇರೆ ಅವತಾರವೆತ್ತಿ ನಡೆಸಿದ ಕಾರ್ಯಗಳೆಲ್ಲವೂ ಕೇವಲ ನಟನೆಯಲ್ಲದೆ ಬೇರೆಯಲ್ಲಾ. ಪ್ರಭೊ, ಸಂಸಾರ ಸಮುದ್ರದಲ್ಲಿ ಸಿಕ್ಕು ನರಳುತ್ತಿರುವ ಮಾನವರಿಗೆ ನಿನ್ನ ಚರಿತ್ರಗಳನ್ನು ಕೇಳುವದಕ್ಕೂ, ಧ್ಯಾನಿಸುವದಕ್ಕೂ, ಆಸೆಹುಟ್ಟಲೆಂದು ಈ ಅವತಾರವನ್ನೆತ್ತಿರುವೆಯಲ್ಲವೆ. ನಿನ್ನ ಪಾದಾಶ್ರಯದಿಂದ ಸಮಸ್ತದುಃಖಗಳನ್ನೂ ಜಯಿಸಿ, ನಿನಗೆ ಅನುಜೀವಿಗಳಾಗಿರುವ ನಮ್ಮನ್ನು ದೂರದೃಷ್ಟಿಯಿಂದ ನೋಡಬೇಡಾ. ಸಮುದ್ರವನ್ನು ಬಿಟ್ಟರೆ ಗಂಗಾಪ್ರವಾಹಕ್ಕೆ ಬೇರೆ ಆಶ್ರಯವಿಲ್ಲದಂತೆ, ನಿನ್ನನು ಬಿಟ್ಟರೆ ನಮಗೆ ಬೇರೆ ಆಶ್ರಯವಿಲ್ಲಾ. ಪ್ರಭೋ ನಿನ್ನ ಪರಮಮಿತ್ರರಾದ ಬಡಪಾಂಡವರ ಅಜ್ಞಾತವಾಸವೆಂಬ ಕಡೆಯ ಕಂಟಕವನ್ನು, ಕಡೆಗಾಣಿಸಬೇಕೆಂದು ಶರಗೊಡ್ಡಿ ಬೇಡುವೆ. ( ಆದರಂತೆ ಮಾಡಿ )

ತಾಳ, ಆದಿ ಪದ ರಾಗ, ಭೈರವಿ

ಕೋಮಲ ಹೃದಯಾ ಪಿತನೇ ಸದಯಾ। ಮಂದರಗಿರಿಧರ ಮಂಗಲದಾಯಾ॥
ಅಬಲೆಯ ಮಾನವ ಜವದಲಿ ಕಾಯ್ವೆ। ಮಧುಕಾಯ। ಹಿತದಾಯ।
ಯದುರಾಯ॥

ವಿಶ್ರಾಂತಿಮಂದಿರ

ಅರ್ಜುನ, ಉತ್ತರೆ, ಸುಧೇಷ್ಣಾ, ದಃಶ್ಶೀಲಾ ಮಾತಾಡುತ್ತ ಕುಳಿತಿರುವರು.

**ಸುಧೇಷ್ಣಾ:**— ಸೈರಂಧ್ರಿ-ಬೃಹನ್ನಳೆಯು, ಹಿಂದೆ ಪಾಂಡವರಲ್ಲಿ ಅಗ್ರಗಣ್ಯನಾದ ಅರ್ಜುನನಲ್ಲಿ ಸಾರಥಿಯಾಗಿದ್ದು, ಅವನಂತೆ ಸಂಗೀತದಲ್ಲಿಯೂ, ನೃತ್ಯದಲ್ಲಿಯೂ, ಕೀರ್ತನೆಯಲ್ಲಿಯೂ, ಯುದ್ಧಕಲೆಯಲ್ಲಿಯೂ ಬಹು ನಿಪುಣಳೆಂದು ಹೇಳಿದೆ. ಆದ್ದರಿಂದ ಸ್ವಲ್ಪ ಕೀರ್ತನೆ ಮಾಡುವದಕ್ಕೆ ಹೇಳಬಾರದೆ ?

**ಸೈರಂಧ್ರಿ:**— ನಾನು ದಾಸಿಯಾಗಿ ಮತ್ತೊಬ್ಬರಿಗೆ ಆಜ್ಞೆಮಾಡುವ ಅಧಿಕಾರವುನನಗಿದೆಯೇ? ತಾವು ಆಜ್ಞೆ ಮಾಡುವದೊಂದೇ ತಡ, ಬೃಹನ್ನಳೆಯು ಶಿದ್ಧಳಾಗಿಯೇ ಇರುವಳು. ಆದ್ದರಿಂದ ಸ್ವಲ್ಪ ಸೂಚನೆಮಾಡಿ

**ಅರ್ಜನ:**— ಮಹಾರಾಣಿಯವರೇ ಇಷ್ಟು ತರ್ಕಗಳೇಕೆ ನಾನೇನು ಒಲ್ಲೆ ನೆನ್ನುವೆನೆ ಹೇಳಿ. ಯಾವವಿಷಯವಾಗಿ ಕೀರ್ತನೆಮಾಡಲಿ ?

**ಸೈರಂಧ್ರಿ:**— ದೇವಿಯವರೇ ಶ್ರೀಕೃಷ್ಣ ಪರಮಾತ್ಮನ ಗುಣಗಳ ವಿಷಯವಾಗಿ ಹೇಳುವದಕ್ಕೆ ಹೇಳಿ.

**ಅರ್ಜುನ:** — ದೇವಿಯವರೇ ಆಗಬಹುದೇನು ?

**ಸುಧೇಷ್ಣಾ:**— ವಿಶ್ರಾಂತಿಮಂದಿರದಲ್ಲಿ-ಯಾವವಿಷಯನನ್ನು ಹೇಳಿದರೂ ವಿಶ್ರಾಂತಿಗಾಗಿಯಲ್ಲವೇ ?

**ಅರ್ಜುನ:**— ಸರಿಹಾಗಾದರೆ ( ಎಂದು ಪ್ರಾರಂಭಿಸುವನು )

ತಾಳ, ರೂಪ ಪದ ರಾಗ, ಚಾಲಕರ್ನಾಟಕೀ

ಪೀತಾಂಬರಧಾರಿ ಮಧುರವಾಣಿ ಕಮಲನಯನಾ। ಜಗದಂತರ್ಯಾಮಿ।
ಸುಗುಣ ಸುಜನವೃಂದ ಜಯನಿಧಾನಾ॥ ಭಕ್ತೋದ್ಧರ ಭಯನಿವಾರಣಾ॥

( ಕೀರ್ತನಪದ್ಧತಿಯಂತೆ ಮಾತಾಡಬೇಕು )

ಭಕ್ತಾದಿಗಳಿರಾ ಯಾವಪರಮಾತ್ಮನು ತಾನೊಬ್ಬನಾಗಿದ್ದರೂ, ಜಗತ್ತಿನ ಸೃಷ್ಟಿಸ್ಥಿತಿಸಂಹಾರಗಳಲ್ಲಿ ಲೀಲಾರ್ಥವಾಗಿ ಪ್ರವರ್ತಿಸುತ್ತಿರುವನೋ, ಯಾವ

ಮಹಾನುಭಾವನು ಜಗತ್ತಿನಲ್ಲಿ ಅಂತರ್ಯಾಮಿಯಾಗಿದ್ದರೂ, ಅದರಿಂದುಂಟಾದ ದೋಷಸಂಬಂಧವಿಲ್ಲದಿರುವನೊ, ಆ ಈಶ್ವರನೇ ಕೃಷ್ಣನು. ಇದಲ್ಲದೆ ಲೋಕದಲ್ಲಿ ದುಷ್ಟರಾಜರು- ಹೆಮ್ಮೆಯಿಂದ ತಮ್ಮಲ್ಲಿಗೆ ಅಕಸ್ಮಾತ್ ಸೇವೆಗಾಗಿ ಬಂದವರ ಯೋಗ್ಯತೆಯನ್ನು ಅರಿಯದೆ ಯಾರು ಮಾತಾಡುವರೋ, ಅಂಥವರನ್ನು ಕೃಷ್ಣನು ಮುಂದಿನಜನ್ಮದಲ್ಲಿ ಹಂದಿಯನ್ನಾಗಿ ಹುಟ್ಟಿಸುವನು. ( ಸುಧೇಷ್ಣಾ ದುಃಶ್ಶೀಲೆಯರು ಒಬ್ಬರ ಮುಖವನ್ನೊಬ್ಬರು ನೋಡುವರು, ಇಷ್ಟರಲ್ಲಿ ವಿರಾಮನು ಅವಸರದಿಂದಬಂದು ?

**ವಿರಾಮು:**— ದೇವಿಯವರೇ ಸಮ್ರಾಟ ಉತ್ತರ ಕುಮಾರ ಯುವ ರಾಜರು, ವಿಶ್ರಾಂತಿಮಂದಿರದ ವ್ಯವಸ್ಥೆನೋಡುವದಕ್ಕೆ ಬರುವರು. ಆದ್ದರಿಂದ ಆಯಾಸ್ಥಳಗಳಲ್ಲಿರುವ ಸಾಮಾನುಗಳು ಸರಿಯಾಗಿವೆಯಷ್ಟೆ.

**ಅರ್ಜುನ:**— ಸರಿಯಾಗಿವೆ. ವ್ಯವಸ್ಥೆಯು ಅದಕ್ಕೆ ತಕ್ಕಂತಿದೆ ಮಹಾರಾಜರು ಮರ್ಯಾದೆಯಿಂದ ಬರುವ ದಾರಿಯು ಸರಿಯಾಗಿದೆ.

**ವಿರಾಮು:**— ತೊಂದರೆ

**ಅರ್ಜುನ:**— ಯಾವದೂಯಿಲ್ಲಾ.

**ವಿರಾಮು:** ಹಾಗಾದರೆ ಬರಬಹುದೊ ?

**ಅರ್ಜುನ:** ಆಗಬಹುದು.

**ವಿರಾಮು:** — ಸರಿ ( ಎಂದು ಒಳಗೆಹೋಗಿ ಕರೆದುಕೊಂಡು ಬರುವಾಗ ಪರಾಕು ಹೇಳುತ್ತಾ ಎರಡೂಕೈಮುಂದೆಮಾಡಿ.)ವೈರಿಗಳಗಂಡ,ರಣಪ್ರಚಂಡ, ಧನುರ್ದಂಡಧರ, ಘನಘೋರ, ರಣಚೀತ್ಕಾರ, ವಿರಾಧಿವೀರ, ಗಂಭೀರ, ರಣಭೀರು ವಿಶ್ರಾಂತಿ ವಿಲಾಸಮಂದಿರ ಸುಕುಮಾರ. ಉತ್ತರಕುಮಾರ ಯುವರಾಜ ಬಹುಪರಾಕ ( ಎಂದು ಮುಂದೆ ಬರುವನು. ಕುಮಾರನು ಹಿಂದಿನಿಂದ ಗಾಂಭೀರ್ಯವಾಗಿ ಬರುವನು. ಬಂದು ಸುತ್ತುಮುತ್ತು ನೋಡುತ್ತಾ ಖುರ್ಚಿಯ ಮೇಲೆ ಕುಳಿತುಕೊಳ್ಳುವನು. )

**ಉತ್ತರ:**—ಬೃಹನ್ನಳೆ ಈಗ ನಾನು ಇಲ್ಲಿಗೆ ಬಂದಕಾರಣವೇನು. ಸವಿಸ್ತಾರವಾಗಿಹೇಳು ?

**ಅರ್ಜುನ:**—ಕಾರಣವು ತಮ್ಮಿಂದಲೇ ತಿಳಿಯಬೇಕು. ಮಹಾರಾಜ

**ಉತ್ತರ:**—ಸರಿ. ನಾನು ಈಗ ಇಲ್ಲಿ ಯಾರಕಡೆಯಿಂದ ಯಾವ ಕೆಲಸವನ್ನು ಮಾಡಿಸಬೇಕು.

**ಅರ್ಜುನ:**—( ನಗುತ್ತಾ ) ಅದು ಸಹ ತಮ್ಮಿಂದಲೇ ತಿಳಿಯಬೇಕು.

**ಉತ್ತರ:**— ಎಲ್ಲಾ ಅವ್ಯವಸ್ಥೆ. ಯಾಕೆ ವಿರಾಮ. ಹೌದೋ ಅಲ್ಲವೋ ?

**ವಿರಾಮ:** ಬುದ್ಧಿ ಅವರು ಮಾಡಿರೋದೆಲ್ಲಾ ಸುವ್ಯವಸ್ಥೆ. ತಾವು ಕೇಳೋದರಲ್ಲಿ ಮಾತ್ರ ಅವ್ಯವಸ್ಥೆ.

**ಉತ್ತರ:**—ಒಳ್ಳೇದು ಬೃಹನ್ನಳೀ ವಿಶ್ರಾಂತಿ ಮಂದಿರದಲ್ಲಿ ನಡೆಯ ತಕ್ಕ ಕಾರ್ಯಗಳು ಯಾವು ?

**ಅರ್ಜುನ:**— ಮಹಾರಾಜ ವಿಶ್ರಾಂತಿಮಂದಿರದಲ್ಲಿ ನಡೆಯತಕ್ಕ ಕಾರ್ಯಗಳೆಂದರೆ ಸಂಗೀತ, ರಂಗೀತ, ಭಾಷಣ, ನರ್ತನ, ಅನೇಕಾನೇಕ.

**ಉತ್ತರ:**—(ಸ್ವ) ಸರಿ ಚನ್ನಾಗಿದೆ ಬುದ್ಧಿ. (ಪ್ರ) ಹೂಂ ಬೃಹನ್ನಳೆ ಮೊದಲು ಅನೇಕಾನೇಕವಾಗಲಿ.

**ಅರ್ಜುನ:**—ಮಹಾರಾಜ. ಅದು ಶಬ್ದದ ವಿಶೇಷಣ.

**ಉತ್ತರ:**—ಸರಿಹಾಗಾದರೆ ಅದನ್ನೆ ಮಾಡಿಸು.

**ಉತ್ತರೆ:**—( ಮುಂದೆಬಂದು) ಅಣ್ಣಾ ಇದೇನು ?

**ಉತ್ತರ:**—ಇದನ್ನೇ ಮಾಡಿಸು ಅದಕ್ಕೇನು?

**ವಿರಾಮ:**—ಇವೆಲ್ಲಾ ಆದರೆ ನಿಮ್ಮಿಂದ ಆಗಬೇಕು.

**ಉತ್ತರ:**—ಹಾಗಲ್ಲಾ. ರಾಜನು ಮಾಡಬೇಕಾದ ಕಾರ್ಯವನ್ನು ರಾಜನು ಮಾಡಬೇಕು ಉಳಿದ ಕೆಲಸಗಳನ್ನು ಅವರವರೇ ಮಾಡಬೇಕು.

**ಅರ್ಜುನ:**— ವಿರಾಮಾ, ನಿಮ್ಮ ಮಹಾರಾಜರಿಗೆ ಯಾವುದು ಬೇಕೆಂಬುದನ್ನು ನೀನೇ ಹೇಳಿಬಿಡು.

**ವಿರಾಮ:**— ಬೃಹನ್ನಳೀ ನಮ್ಮ ಯುವರಾಜರಲ್ಲಿದ್ದ ವಿದ್ಯಾ–ಇನ್ನಾವ ರಾಜರಲ್ಲೂಯಿಲ್ಲಾ. ಸರಸ್ವತಿಯು ಅವತಾರವಾದಕೂಡಲೇ ವಾಸಮಾಡುವ

ದಕ್ಕೆ ಯಾರಲ್ಲಿಯೂ ಸರಿಯಾದ ಸ್ಥಳಸಿಗಲಿಲ್ಲಾ.

ಅರ್ಜುನ:—ಕಡೆಗೆ ?

ವಿರಾಮು:—ನಮ್ಮ ಈ ಮಹಾರಾಜರಲ್ಲಿ ವಾಸಮಾಡಿಕೊಂಡ್ಲು.

ಅರ್ಜುನ:—ಹಾಗಾದರೆ ಸರಸ್ವತಿಯ ವಾಸಸ್ಥಾನವೆಂದರೆ ಇಲ್ಲೇ ?

ಉತ್ತರ:—ವಿರಾಮುನ ತಲೆಯು ಯುವರಾಜನಿಗಿಂತಲೂ ವಿಶಾಲ ವಾಗಿದೆ.

ವಿರಾಮು:—(ನಗುತ್ತಾ) ಬುದ್ಧಿ ಇದು ನನ್ನಲ್ಲಿರುವ ತಮ್ಮ ಅಭಿಮಾನ.

ಉತ್ತರ:— ಹೂ. ಬ್ರಹನ್ನಳೇ ಉತ್ತರೆಗೆ ಸಂಗೀತ ಅಭ್ಯಾಸವು. ಸರಿಯಾಗಿಆಗಿದೆಯಷ್ಟೆ ?

ಅರ್ಜುನ:—ಹೌದು ಮಹಾರಾಜ

ಉತ್ತರ:—ತಾಳವು ತಾಳಿನಲ್ಲಿರುವದೋ ?

ಅರ್ಜುನ:—ಹೌದು.

ಉತ್ತರ:—ಹಾಗಾದರೆ ತಾಳಾ ಮತ್ತೂ ರಾಗಾ ಇವರಡೂಯಿಲ್ಲದ ಒಂದು ಪದವನ್ನು ಸರಿಯಾಗಿ ಹೇಳಿಸು ?

ವಿರಾಮು:—ಅಲ್ಲಿಯಿರೋದು ವಿದ್ಯಾದಗುಟ್ಟು.

ಉತ್ತರ:— ಬ್ರಹನ್ನಳೆ ಉತ್ತರೆಗೆ ಸರಿಯಾದ ರಾಗದಲ್ಲಿ ಒಂದು ವಾತಾವರಣವನ್ನು ಅನ್ನುವದಕ್ಕೆ ಹೇಳು.

ಅರ್ಜುನ:—ವಾತಾವರಣ ಅಲ್ಲ ಮಹಾರಾಜ.

ಉತ್ತರ:—ಹಾಗಾದರೆ ?

ಅರ್ಜುನ:—ವರ್ಣ.

ವಿರಾಮು:—ನಮ್ಮ ಮಹಾರಾಜರಿಗೆ ಸ್ವಲ್ಪುವಾತ ಹೆಚ್ಚು, ಅದಕ್ಕೆ ಹಾಗೆಂದರು.

ಅರ್ಜುನ:—ಎಲ್ಲಿ ಒಂದು ವರ್ಣವನ್ನು ಹೇಳು ?

ಉತ್ತರ:—ಯಾವರಾಗದಲ್ಲಿ ?

ಅರ್ಜುನ:—ಮಹಾರಾಜ ಯಾವ ರಾಗದಲ್ಲಿ ಎಂಬುದನ್ನು ಹೇಳಲಿಲ್ಲ.

ಉತ್ತರ:—ಸಿಟ್ಟಿನ ರಾಗದಲ್ಲಿ ಹೇಳಿಸು ?

**ಅರ್ಜುನ:**—ಮಹಾಸ್ವಾಮಿ ಶಿಟ್ಟಿನರಾಗವು ಮೂವತ್ತೆರಡು ರಾಗ ದಲ್ಲಿ ಇಲ್ಲಾ.

**ಉತ್ತರ:**—ಅದಕ್ಕೇನು ಮೂವತ್ತೆರಡೇ ಆಗಬೇಕೆಂದು ಯಾರಾದರೂ ನಿರ್ಣಯಿಸಿದ್ದಾರೇನು ?

**ಅರ್ಜುನ:**—( ನಸ ನಗುತ್ತ ) ಅದೇನಿಲ್ಲಾ. ಶಾಸ್ತ್ರಸಮ್ಮತ ರಾಗ ವಾಗುವದಿಲ್ಲಾ ಅದಕ್ಕೆ

**ಉತ್ತರ:**—ಅದಕ್ಕೇನು. ನಮ್ಮ ಸ್ವಂತಶಾಸ್ತ್ರದಲ್ಲಿ ಹೀಗೆ ಹೇಳಿದೆ· ರಾಗರೇಗಿದ್ದು. ತಾಳತೋಡಿದ್ದು. ಅಂತಾ.

**ಉತ್ತರೆ:**—ಬೃಹನ್ನಳೆ ನಮ್ಮ ಅಣ್ಣನ ಪಾಂಡಿತ್ಯವು ನಿನಗೆ ಗೊತ್ತಾ ಯಿತಲ್ಲಾ

**ಅರ್ಜುನ:**—ಓಹೋ ಸಂಪೂರ್ಣ. ಆಗಲಿ ಶಂಕರಾಭರಣದಲ್ಲಿ ಸಾಹಿತ್ಯರೂಪವಾಗಿಹೇಳು

**ಉತ್ತರೆ:**

ತಾಳ, ಏಕತಾಳ ಪದ ರಾಗ, ಶಂಕರಾಭರಣ

(ಕೈಯಲ್ಲಿತಾಳವನ್ನು ಹಿಡಿದು ಅನ್ನುವಳು, ಉತ್ತರನೂ ಅನ್ನುವನು)

ನತ್ತನತ್ತ ನನತಡಿರೆತಡಿಂ | ತನನನನನನನನದಿರೆ ತದಿಂ | ನಾದಿರೆ ದಿರೆದಿರೆ ||
ತಾದಿರೆದಿರತನನನನ | ತನಂತನಂ | ದಿಲ್ಲಾತೊಂದಿರತಾನೆ | ಉದನಿತನಿತಾನೆ |
ಧಾಕಿಟಕಿಟಧಗಿನ ಧಾಗದಗಿನ | ತಿರಕಿಟತಿರ | ಕಿಟದಿರದಿರ ||

**ಉತ್ತರ:**— ಬೃಹನ್ನಳೆ ಈ ರಾಗಬೇಡ.

**ಅರ್ಜುನಃ**— ತಾವು ಹೇಳಿದ ರಾಗದಲ್ಲಿ ಹೇಳಿಸುತ್ತೇನೆ.

**ಉತ್ತರಃ** – ಬೇಡ ಆಮೇಲೆ ತೊಂದರೆ ಬಂದೀತು.

**ಉತ್ತರೆಃ** – ಅದೇನಿಲ್ಲಾ.

**ಉತ್ತರಃ**—ಹಾಗಾದರೆ ಶಂಕರಾಭರಣದಲ್ಲಿ ಹೇಳು ?

**ಅರ್ಜುನಃ** —ಮಹಾರಾಜ ಈಗ ಹೇಳಿದ್ದೇ ಶಂಕರಾಭರಣ.

**ಉತ್ತರಃ** · ಭೇ ಅಲಾ .

**ಅರ್ಜುನಃ**— ಹಾಗಾದರೆ ?

**ಉತ್ತರಃ**— ಇದು ಬರೀಭರಣ

**ಅರ್ಜುನಃ**—ಅಂದರೆ ಅರ್ಥವಾಗಲಿಲ್ಲಾ ತಾವು ಹೇಳಿದ್ದು.

**ಉತ್ತರಃ**—ಅಂದರೆ ಸಾಹಿತ್ಯಗಳಿಂದ ಕೂಡಿದ್ದಕ್ಕೆ ಭರಣವೆನ್ನುತ್ತಾರೆ. ಇದರಲ್ಲಿ ಶಂಕರನಿಲ್ಲಾ ಅದಕ್ಕೆ ಕಳೆಕಟ್ಟಲಿಲ್ಲಾ.

**ಅರ್ಜುನಃ**—ಅದೇಕೆ ?

**ವಿರಾಮಃ** ತಿಳಿಯದೇ ಇದ್ದದ್ದಕ್ಕೆ.

**ಅರ್ಜುನಃ**—ಅಂತೂ ಪೂರ್ಣ ಇದೆ

**ವಿರಾಮಃ**—ಅಜ್ಞಾನ.

**ಉತ್ತರಃ**— ಬ್ರಹನ್ನಳೆ ಸರಿಯಾಗಿ ಶಂಕರಾಭರಣದಲ್ಲಿ ಆಲಾಪ ಮಾಡು ದುಃಖದಿಂದ.

**ಅರ್ಜುನಃ**— ಉತ್ತರೆ, ಜೀವನಪುರಿಯಲ್ಲಿ ಒಂದು ಪದವನ್ನು ಹೇಳು.

**ಉತ್ತರಃ**— ಜೀವನಪುರಿ ಬೇಡಾ.

**ಅರ್ಜುನಃ**—ಓಹೋ ಮರೆತೆ. ಶಂಕರಾಭರಣದಲ್ಲಿ ಅಲ್ಲವೆ ಆಗಲಿ (ಕಣ್ಣುಸನ್ನೆಮಾಡಿ) ಉತ್ತರೆ ಅದು ಆರಾಗ.

**ಉತ್ತರೆಃ**—ಸರಿ ತಿಳಿಯಿತು.

**ವಿರಾಮಃ**—ಯಾವದಾದರೂ ಆಂದು ಬಿಡ್ರಿ, ಇಷ್ಟೇಕೆ ಚರ್ಚೆ, ಪಾಪ ಅವರಿಗೇನ ಗೊತ್ತು ಕುಮಾರರಿಗೆ

**ಉತ್ತರೆಃ** —

ತಾಳ, ತ್ರಿತಾಳ ದ. ರಾಗ ದೇಶ

ಎದುಕುಲ ನಂದನ । ಸುಮುನ । ಕಮಲನಯನ । ಮಂದರಧರನ । ನಂದ ಗೋಪಪ್ರಿಯನ ।

ಹಾಡುತ್ತಿರುವಾಗ ಉತ್ತರನು ಹಾವಭಾವದಿಂದ ಸುತ್ತುಹಾಕುವನು. )

**ಉತ್ತರಃ**— ಹಾ ಇದಕ್ಕನ್ನುತ್ತಾರೆ ಶಂಕರಾಭರಣ.

ವಿರಾಮು:—ಬೃಹನ್ನಳೆ ರಾಗದ ಉತ್ಪತ್ತಿ ಇವರಲ್ಲೇ ಆದದ್ದು.

ಅರ್ಜುನಃ—ಬಹಳ ಕಷ್ಟಪಟ್ಟಿದ್ದಾರೆ. ಪಾಪ !

ವಿರಾಮು:—ಪಟ್ಟಿದ್ದಾರಲ್ರಿ ಹುಟ್ಟಿದ್ದಾರೆ.

ಉತ್ತರ:—ಬೃಹನ್ನಳೆ ರಾಗದಜ್ಞಾನ ಇಷ್ಟೇಯಂದು ತಿಳಿಯಬೇಡ. ನಾನು ಯಾವದಕ್ಕೂ ಮನಸ್ಸುಮಾಡುವದೇಯಿಲ್ಲಾ.

ವಿರಾಮು:—(ಸ್ವ) ಮಾಡಿದರೆ ಉಳಿಯೋದೆಯಿಲ್ಲಾ.

ಉತ್ತರಃ— ಯಾಕಂದರೆ ಪಾಪ. ಸಂಗೀತಗಾರರ ಹೊಟ್ಟೆಯ ಮೇಲೇಕೆ ಹೊಡೆಯಬೇಕು. ಏನೋ ಹೊಟ್ಟೆಯಪಾಡು. ಬಂದಿರುತ್ತಾರೆ ದೂರದಿಂದ ಅವರಿಗೇಕೆ ತೊಂದರೆಕೊಡಬೇಕು. ಅಲ್ಲವೆ.

ಅರ್ಜುನ:—ಹೌದು ಬುದ್ಧಿ.

ವಿರಾಮು:—ಕಳಕಳಿ ಬಹಳ ವಿದ್ಯಾವಂತರ ಮೇಲೆ.

ಉತ್ತರಃ—ಬೃಹನ್ನಳೆ ನನ್ನ ಸಂಗೀತವಿದ್ದೆಯು ಬಹುದೂರ ಹೋಗಿದೆ. ( ಕೈ ಮೇಲೆಮಾಡಿ ತೋರಿಸುವನು. )

ಅರ್ಜುನ:—ಅಂದರೆ

ವಿರಾಮು:—ನೈವೇದ್ಯದ ವರೆಗೆ.

ಉತ್ತರ:—ಬೃಹನ್ನಳೆ. ಸಂಗೀತದಲ್ಲಿ ನಿನಗೇನು ಅಷ್ಟುಜ್ಞಾನವಿದ ಹಾಗೆಯಿಲ್ಲಾ.

ವಿರಾಮು:—(ಸ) ನಮ್ಮ ಮಹಾರಾಜರಿಗಿದ್ದಷ್ಟು-ಅಜ್ಞಾನಯಾರಿಗೂ ಯಿಲ್ಲಾ ಜಗತ್ತಿನಲ್ಲಿ

ಉತ್ತರ:—ಬೃಹನ್ನಳೆ ಇನ್ನೊಂದುಸಾರೆ ಸಮಯಸಿಕ್ಕಾಗ ನಿನಗೆ ಆರೋಹಣ ಅವರೋಹಣ.

ವಿರಾಮು:—(ಸ್ವ) ಅಹಿರಾವಣ, ಮಹಿರಾವಣ, ಶೀತಾರಮಣ, ವೆಂಕಟರಮಣ, ಲಕ್ಷ್ಮೀರಮಣ

ಉತ್ತರ—( ನೆನಪುಮಾಡಿದಂತೆ ) ಇನ್ನೂ ಅನೇಕ ದೂರದ ವರೆಗೆ ತಿಳಿಸಿಕೊಡುತ್ತೇನೆ.

**ವಿರಾಮ:**— ಬೃಹನ್ನಳೆ ದೂರದವರೆಗೆ ಅಂದರೆ ಗೊತ್ತಾಯಿತೇನು.

**ಅರ್ಜುನ:**— ಇಲ್ಲಾ

**ವಿರಾಮ:**— ಈಗ ಹೇಳಿದರಲ್ಲಾ ಕಡೇಶಬ್ದ.

**ಅರ್ಜುನ:**—( ನೆನಪುಮಾಡಿದಂತೆ ) ಓಹೋ ವ್ಯಂಕಟರಮಣ

**ವಿರಾಮ:**— ಅದರ ಮುಂದೆ ಯಾವುದು.

**ಅರ್ಜುನ:**—( ನಕ್ಕು ) ಓಹೋ ಗೋವಿಂದ.

**ವಿರಾಮ:**— ಹಾ. ಅಲ್ಲಿಯ ವರೆಗೂ ಹೋಗಿದೆ

( ಇಷ್ಟರಲ್ಲಿ ವಿರಾಟರಾಯನು ಬಂದು ಸಿಂಹಾಸನ ರೂಪವಾದ ಖುರ್ಚಿಯ ಮೇಲೆ ಕುಳಿತುಕೊಳ್ಳುವನು. )

**ವಿರಾಟ:**— ಏನಿದು ಕುಮಾರಾ ಹೀಗೆ ನೃತ್ಯಗಾಯನದಲ್ಲಿ ಕಾಲಕಳೆಯುತ್ತಾ ಕುಳಿತರೆ ?

**ಸೇವಕ:**—( ಅವಸರದಿಂದ ಬಂದು ನಮಸ್ಕರಿಸಿ ) ಪ್ರಭೋ ನಮ್ಮ ಉತ್ತರ ದಿಕ್ಕಿನ ಗೋವುಗಳನ್ನು ತ್ರಿಗರ್ತನು ಸೆರೆಹಿಡಿದು ನಮ್ಮ ಪಟ್ಟಣದ ಮೇಲೆ ದಂಡೆತ್ತಿ ಬರುತ್ತಿರುವನು.

**ಸುಧೇಷ್ಣಾ:**— ನನ್ನ ತಮ್ಮನಾದ ಕೀಚಕನು ಮಡಿದುದರಿಂದಲೇ ಅವನಿಗಿಷ್ಟು ಧೈರ್ಯವಾಯಿತು. ( ದುಃಖಿಸುವಳು )

**ಉತ್ತರ:**— ಹೀಗೆ ಶೋಕಿಸುವದು ಶೂರರಿಗೆ ಅಪಮಾನ.

**ಸುಧೇಷ್ಣಾ:**— ಅದೇಕೆ

**ಉತ್ತರ:**—( ವೀರಾವೇಶದಿಂದ ) ಜನನೀ ಕೇಳು ನಿನ್ನ ಕುಮಾರನು ಮನಸ್ಸುಮಾಡುವದೇಯಿಲ್ಲಾ.

**ವಿರಾಮ:**— ಅದೇಇಲ್ಲಾ ಮಾಡುವದಕ್ಕೆ.

**ಉತ್ತರ:**— ಮಾಡಿದರೆ ತ್ರಿಗರ್ತನಲ್ಲಾ ತ್ರಿಮೂರ್ತಿಗಳು ಬಂದರೂ ತಿರುಗುವದಿಲ್ಲಾ ಸಾವಿರ ಕೀಚಕಮಾವನವರ ಶಕ್ತಿ ಈ ನನ್ನ ದೋರ್ದಂಡವಾದ ಬಾಹುಗಳಲ್ಲಿದೆ ನಾನು ಇರುವವರೆಗೆ ಭಯವೆಂಬ ಶಬ್ದಕ್ಕೆ ಆಸ್ಪದವಿಲ್ಲಾ.

ವಿರಾಮ:— ಇನ್ನು ಭಯಾನೂಯಿಲ್ಲಾ. ತೊಂದರೇನೂಯಿಲ್ಲಾ.

ಉತ್ತರ: — ಹೂಂ ವಿರಾಮಾ ತೆಗೆದುಕೋ ಹಗ್ಗಗಳನ್ನು.

ವಿರಾಮ:— ಇನ್ನು ತಡಾ ಆಗೋದಿಲ್ಲಾ ( ಸ್ವ ) ಸಾಯೋದು.

ಉತ್ತರೆ:— ಅಣ್ಣಾ ಸಮಾಧಾನಾ.

ಉತ್ತರಃ— ಸಮಾಧಾನಾ ಎಲ್ಲಿಯವರೆಗೆ. ವೈರಿಗಳು ರಾಜ್ಯದಮೇಲೆ ದಂಡೆತ್ತಿ ಬರುವಾಗ ಹೇಡಿಗಳಂತೆ ಸಮಾಧಾನದಿಂದ ಕುಳಿತರೆ? ರಾಜ್ಯವು ಉಳಿಯುವ ಬಗೆಹೇಗೆ?

ವಿರಾಮಃ— ಉಳಿಯೋದಕ್ಕೆ ಅಸ್ಪದನೇಯಿಲ್ಲಾ.

ವಿರಾಟಃ— ಮಗು ನಾನೂ ತ್ರಿಗರ್ತನಮೇಲೆ ಸಾಗಿಹೋಗುತ್ತೇನೆ. ಇನ್ನು ಸ್ವಲ್ಪುದಿವಸ ವಿಶ್ರಾಂತಿಮಂದಿರಕ್ಕೆ ವಿಶ್ರಾಂತಿಕೊಡು ( ಹೋಗಲೆತ್ನಿಸುವನು. )

ಉತ್ತರಃ— (ತಡೆದು) ಜನಕಾ ತಮ್ಮನ್ನು ಕಳಿಸಿ ಬಿಸಿನೆತ್ತರದ ಸಂಚಾರವುಳ್ಳ ಬಲಾಢ್ಯ ಕ್ಷತ್ರಿಯ ತರುಣರು ಮನೆಯಲ್ಲಿ ಕುಳಿತರೆ ತರುಣ ಪೀಳಿಗೆಗೆ ಕಳಂಕವಲ್ಲವೇ. ಮುದುಕರೇ ಜಯಶಾಲಿಗಳಾಗಿ ರಾಜ್ಯಸಂಪಾದಿಸಬೇಕೆಂದು ಬ್ರಹ್ಮಸಂಕಲ್ಪವಿದೆಯೆ.

ವಿರಾಮಃ— ಪಾಪ ಅಯ್ಯೋಪಾಪ. ಪರಾಕ್ರಮದ ಮರಿ.

ವಿರಾಟಃ— ಕುಮಾರಾ ಬರುವೆ ಜಾಗ್ರತೆ. (ಹೋಗುವನು)

ಉತ್ತರಃ— ನಡೆಯಿರಿ ಪುನಃ ಸಂಗೀತನೃತ್ಯಗಳನ್ನು ಆರಂಭಿಸೋಣ.

ಉತ್ತರೆಃ— ಅಗ್ರಜಾ, ನೀನೆಂತಹ ಕ್ಷತ್ರಿಯನೋ ತಾತನು ಹೋಗುವಾಗ ಏನೆಂದು ಹೇಳಿದನು

ಉತ್ತರಃ — ವಿಶ್ರಾಂತಿಮಂದಿರವನ್ನು ಬಿಟ್ಟು ಎಲ್ಲಿಯೂ ಹೋಗಬೇಡ ಜಾಗ್ರತೆಯಿಂದಿರು. ಅಷ್ಟೆ.

ಉತ್ತರೆಃ -- ಅಮ್ಮಾ ಸೈರಂಧ್ರಿ ನಡೆಹೋಗುವ. ಇಂತಹ ಹೇಡಿ ಮಾತುಗಳನ್ನು ಕೇಳುವದಕ್ಕೆ ಹೆಂಗಸಾದ ನನಗೆ ಸಹ ಲಜ್ಜೆಯಾಗುತ್ತಿದೆ.

ಸಖಿಯರೆ ನಡೆಯಿರಿ. (ಸಿಟ್ಟಿನಿಂದ ಉತ್ತರನಕಡೆಗೆ ನೋಡುತ್ತಾ ಹೋಗುವರು)
( ಉತ್ತರೆಯು ಹಿಂದೆ ನಿಂತು )

ತ್ರಿತಾಳ, ಪದ ರಾಗ, ಅಸಾವೇರಿ

ಹೇಡಿನುಡಿಗಳನು ಕೇಳಿಸುನಾಸು | ಪಾಡುತಾಡುತೆ ಕಾಲಕಳೆಯುವ | ಮೂಢ ತನದಲಿ ನಲಿದು ಅಲೆಯುವ ‖ ಹೀನಾಗ್ರಜನಾ ಹೀನಭಾವವ | ನೋಡಲೆಂತು ನಾಭಾರತಾಂಗನೆ ‖ ( ಪದವನ್ನು ಪೇಳುತ್ತಾ ಹೋಗುವಳು )

**ಉತ್ತರಃ**— ವಿರಾಮ ವೀರರ ಗುಣಗಳನ್ನು ಕಂಡುಹಿಡಿಯಬೇಕಾದರೆ ವೀರರ ವಿನಃ ಸಾಧಾರಣದವರಿಗೆ ಸಾಧ್ಯವಿಲ್ಲಾ

**ವಿರಾಮಃ**— ಅದಕ್ಕಾಗಿಯೇ ಬಿಟ್ಟುಹೋದದ್ದು ಮಹಾರಾಜರು

**ಉತ್ತರಃ**— ಮಿತ್ರಾ ವಿರಾಮಾ. ಪರಾಕ್ರಮವೆಂಬ ಶಬ್ದದಲ್ಲಿ ಎಷ್ಟು ಗಾಂಭೀರ್ಯವು ತುಂಬಿದೆನೋಡು. ಅಂದಮೇಲೆ

**ವಿರಾಮಃ**— ಕಂಡುಹಿಡಿಯುವದು ಕಷ್ಟ. ಅಂತಹ ಪುಣ್ಯಾತ್ಮರನ್ನು ನೋಡುವದೂ ಕಷ್ಟ.

**ಉತ್ತರಃ**— ನನ್ನಪರಾಕ್ರಮವನ್ನು ಕಂಡುಹಿಡಿಯಬೇಕಾದರೆ ಹಿಂದಿನ ಹಿರಿಯರ ಪುಣ್ಯಬೇಕು. ಇಲ್ಲವಾದರೆ.

**ವಿರಾಮಃ**— ಕಣ್ಣುಗಳೇ ಕಾಣುವದಿಲ್ಲಾ.

**ಉತ್ತರಃ**— ಅಂತಹ ಪರಾಕ್ರಮಿಗಳು ಯಾರು.

**ವಿರಾಮಃ**—ನನ್ನ ವಿನಃ ತಮ್ಮ ಪರಾಕ್ರಮದಗುಟ್ಟು ಅನ್ಯರಿಗೆ ಅಸಾಧ್ಯ

**ಉತ್ತರಃ**— ಏತಕ್ಕೆ.

**ವಿರಾಮಃ**— ತಿಳಿಯುವದಕ್ಕೆ.

**ಉತ್ತರಃ**— ವಿರಾಮ. ಕೌರವರು ಏನುಮಹಾ. ನನ್ನ ದೃಷ್ಟಿಯಿಂದ ಕೌರವರೆಂದರೆ ಕಾಜುಗದ ಮರಿಗಳು.

**ವಿರಾಮಃ**— ಬುದ್ಧಿ, ಕಾಜುಗದಮರಿಗಳಲ್ಲಾ. ಕೋಳಿಯಮರಿಗಳು.

**ಉತ್ತರಃ**— ವಿರಾಮಾ ತಂದೆಯವರು ದೊಡ್ಡ ತಪ್ಪು ಮಾಡಿದರು. ಬಿಟ್ಟುಹೋಗಿ. ಇಲ್ಲವಾದರೆ, ಇಷ್ಟು ಹೊತ್ತಿಗೆ.

ವಿರಾಮಃ ಕೇಡಿಯು ಹೆಸರಿನ ಬೂದಿಕೂಡಾ ಸಿಗುತ್ತಿದ್ದಿಲ್ಲಾ. ನೋಡುವದಕ್ಕ

ಉತ್ತರಃ— ಬ್ರಹನ್ನಳೇ ಕೇಳು ನನ್ನ ಪರಾಕ್ರಮ.

ವಿರಾಮಃ— ತಮ್ಮ ಪರಾಕ್ರಮದ ಶಬ್ದಗಳನ್ನು ಕೇಳಿಕೇಳಿ ಕಿವಿಗಳೇ ಮಂದವಾಗಿವೆ.

ಅರ್ಜುನಃ— ಹೌದು, ಇದುಮಾತ್ರ ನಿಜವಾದ ಮಾತು.

ಉತ್ತರಃ— ಪಾಪ ಪಾಪ ಅದಕ್ಕೇನು ತಿಳಿಯಬೇಕು ಮಿತ್ರಾ ಬ್ರಹನ್ನಳಿಯು ಹೆಂಗಸೇನೋ.

ವಿರಾಮಃ— ಅಲ್ಲಾ

ಉತ್ತರಃ— ಹಾಗಾದರೆ ಗಂಡಸೇನು.

ವಿರಾಮಃ— ಗಂಡಸೂ ಅಲಾ

ಉತ್ತರಃ— ಅಂದಮೇಲೆ ಹೇಗೆ ತಿಳಿಯಬೇಕೋ.

ಅರ್ಜುನಃ— ಹೌದು ಬುದ್ಧಿ ನಿಜವಾದ ಮಾತು. ಯುದ್ಧವೆಂದರೆ ಏತಕ್ಕೆನ್ನು ಕ್ತಾರೆಂಬುದೇ ತಿಳಿಯದು.

ಉತ್ತರಃ— (ಕನಿಕರದಿಂದ) ಪಾಪ ಹೊಟ್ಟೆಪಾಡಿಗಾಗಿ ಬಂದದ್ದು. ಬ್ರಹನ್ನಳೇ ನಿಜವಾಗಿ ವಿಚಾರಮಾಡಿದರೆ, ಅದರಲ್ಲಿ ಏನೂ ಇಲ್ಲಾ

ವಿರಾಮಃ— ಹುರುಳು

ಉತ್ತರಃ— ಬ್ರಹನ್ನಳೆ ಕೇಳು. ಯುದ್ಧವೆಂದರೆ ವೈರಿಗಳ ಮೇಲೆ ಬಾಣಬಿಡುವದು.

ವಿರಾಮಃ— ಅಷ್ಟೆ. ಅವರು ಬಿಟ್ರು ಅಂದ್ರೆ ಕಣ್ಣು ಮುಚ್ಚಿ ಬಿಡೋದು

ಉತ್ತರಃ— ವಿರಾಮಾ ಯಾಕೋ ಬಹಳ. (ಹೊಟ್ಟೆಯನ್ನು ಹಿಡಿದು)

ವಿರಾಮಃ— ಹಸಿವೆ ಏನಬುದ್ಧಿ.

ಉತ್ತರಃ— ಹೌದು, ವಿರಾಮಾ ಎಷ್ಟು ದೂರದರ್ಶಿಯೋ ನೀನು.

ವಿರಾಮಃ— ಸಹವಾಸ ನೋಡಿ ಬುದ್ಧಿ. ಅದರಂತೆಗುಣ.

ಉತ್ತರೆ:— ನನ್ನ ಸಹವಾಸದಲ್ಲಿರುವದರಿಂದಲೇ ಜೀವಂತನಾಗಿರುವ. ಇಲ್ಲಿಯವರೆಗೆ ಇಲ್ಲವಾದರೆ.

ವಿರಾಮು:— (ಸ್ವ) ಇಬ್ಬರೂ ಹೋಗುತ್ತಿದ್ದಿ ಮರೆತು ಇಷ್ಟೊತ್ತಿಗೆ. ಬನ್ನಿ ಬುದ್ಧಿ ಹೋಗೋಣ ಪಾಠಶಾಲೆಗೆ.

( ಹೋಗುವರು )

ಅರ್ಜುನ:— ಪರದಾಸ್ಯಕ್ಕಿಂತಲೂ ಜಗತ್ತಿನಲ್ಲಿ ಹೇಯವಾದ ಕಾರ್ಯವೇ ಇಲ್ಲಾ, ಸರ್ವಾಂತರ್ಯಾಮಿಯಾದ ಶ್ರೀಕೃಷ್ಣಪರಮಾತ್ಮನ ದಯದಿಂಗ ಲೋಕೈಕ ವೀರನೆನಿಸಿಕೊಂಡು, ಮೂರುಲೋಕದ ಗಂಡನೆಂದು ಮೆರೆಯುವ ನಾನು. ಇಂದು ಕೇವಲ ಪಶುಸಮಾನನಾದ. ಈ ತಿಳಿಗೇಡಿ ಹುಡುಗನಿಂದ ಹೀನ ಶಬ್ದಗಳನ್ನಾಡಿಸಿಕೊಳ್ಳುವ ಸಮಯವನ್ನು ಒದಗಿಸಿದೆಯಾ, ಆಗಲಿ ಬರುವ ಆಗುಹೋಗುಗಳಿಗೆಲ್ಲಾ ಆ ನಮ್ಮ ಅಪಾರಮಹಿಮನಾದ ಅರವಿಂದಾಕ್ಷನೇ ಸಾಕ್ಷಿಯಾಗಿರುವನು, (ಮುಂದೆನೋಡಿ) ಅವರಾಗು ಉತ್ತರಕಾಯಿ ವಯಸ್ಸು ಚಿಕ್ಕದಾದರೂ ಅಂತಃಕರಣವು ಅಪಾರವಾಗಿರುವದು. ಅಬಲೆಯಾದರೂ ರಾಜಕಾರಣದಲ್ಲಿ ಪ್ರಭಲೆಯಾಗಿರುವಳು. ಪಂಡು ಪುತ್ರನಾದ ಪಾರ್ಥನೊಡನೆ ಮಾತಾಡಲು, ವಿರಾಟನ ಪರಿವಾರದಲ್ಲಿ ಇವಳೊಬ್ಬಳು ಮಾತ್ರ ಯೋಗ್ಯಳಾಗಿರುವಳು. ಒಳ್ಳೇದು ಬರಲಿ.

ಉತ್ತರೆ:— ಬೃಹನ್ನಳೇ.

ಅರ್ಜುನ:— ತಾಯಿ ನೃತ್ಯವನ್ನು ನಡಸೋಣವೇ,

ಉತ್ತರೆ:— ಬೃಹನ್ನಳೇ ಈಗ ಬಂದಿರುವ ಗಂಡಾಂತರದಲ್ಲಿ ರಾಜ್ಯವೇ ಮುಳುಗುವ ಪ್ರಸಂಗವಿದೆ. ಇಂಥದರಲ್ಲಿ ನೃತ್ಯಗಾಯನಗಳೇ.

ಅರ್ಜುನ .. ತಾಯಿ, ರಾಜಕಾರಣದ ಶಬ್ದವನ್ನು ಸಹ ಅರಿಯದ ನಾನು ನನ್ನ ಕರ್ತವ್ಯವನ್ನು ಸೂಚಿಸಿದೆನು.

ಉತ್ತರೆ:— ಬೃಹನ್ನಳೆ, ಈ ಸಮಯದಲ್ಲಿ ಏನಾದರೊಂದು ಶಕ್ಯ ಯುಕ್ತಿಯನ್ನು ಸೂಚಿಸಬಾರದೆ.

ಅರ್ಜುನ:— (ನಕ್ಕು) ಹೇಡಿಯಲ್ಲಿ ವಜ್ರಾಯುಧವನ್ನು ಕೇಳಿದಂತೆ ಹೊಟ್ಟೆಯ ಪಾಡಿಗಾಗಿ ಬಂದ ನನ್ನನ್ನು ಕೇಳಿದರೆ ಏನು ಹೇಳಲಿ ತಾಯಿ.

ಉತ್ತರೆ:— ಅದೇನಿದ್ದರೂ ನಿನ್ನನ್ನೇ ಕೇಳಬೇಕೆಂದು ಮನವು ಅಂತರಂಗದಲ್ಲಿ ಮೇಲಿಂದಮೇಲೆ ಸೂಚಿಸುತ್ತಿರುವದು; ಆದ್ದರಿಂದ ನಿನಗೆ ತಿಳಿದವುಟ್ಟಿಗೆ ಅಭಿಪ್ರಾಯವನ್ನು ಕೊಡಲು ಅಡ್ಡಿಯೇನಿದೆ.

ಅರ್ಜುನ— ( ತಲೆಯನ್ನು ತಿಳಿಯದವನಂತೆ ತುರಿಸಿಕೊಳ್ಳುತ್ತಾ ) ಅಡ್ಡಿ ಏನೂ ಇಲ್ಲಾ. ಆಗಲಿತಾಯಿ ತಾವಿಷ್ಟು ವಿಶ್ವಾಸದಿಂದ ಕೇಳುತ್ತೀರೆಂದಮೇಲೆ, ನಿರ್ವಾಹವಿಲ್ಲಾ. ಹೀಗೆಮಾಡಿ, ಕೌರವರನ್ನು ನಾಶಗೊಳಿಸಬೇಕಾದರೆ, ಪಾಂಡವರವಿನಃ ಬೇರೊಬ್ಬರಿಂದ ಸಾಧ್ಯವಿಲ್ಲಾ ಅನ್ನುತ್ತಾರೆ ಜನರು. ಪಾಂಡವರು ಅಜ್ಞಾತವಾಸದಲ್ಲಿರುವರಂತೆ ಅವರು ಸಿಗುವದೂ ಕಷ್ಟ. ನೋಡಿ ಪ್ರಯತ್ನಮಾಡಿ, ಅಕಸ್ಮಾತ್ ಸಿಗಬಾರದೇಕೆ ಸಿಕ್ಕರೆಮಾತ್ರ ನಿಮ್ಮ ಕಾರ್ಯವು ಖಂಡಿತವಾಗಿ ಕೈಗೂಡುವದು.

ಉತ್ತರೆ:— ( ನಸುನಕ್ಕು ) ಸರಿ ಬಣವಿಗೆ ಬೆಂಕಿ ಹತ್ತಿದಾಗ, ಬಾವಿಯು ಹಗ್ಗಕ್ಕೆ ಅಂಗಡಿಗೆ ಹೋದರೆಂಬಂತೆ, ನಿನ್ನ ಸೂಚನೆಯಾಯಿತು. ಒಂದು ವೇಳೆ ಪಾಂಡವರು ಸಿಕ್ಕರೆ, ಅಜ್ಞಾತವಾಸದಲ್ಲಿರುವ ಅವರನ್ನು ಪ್ರಕಟಿಗೊಳಿಸಿ ಪುನಃ ಮಹಾತ್ಮನನ್ನು ವನವಾಸಕ್ಕೆ ಕಳಿಸುವ, ಪಾಪಕ್ಕೆ ಗುರಿಯಾಗಬೇಕಲ್ಲವೆ ಛೆ -ದೆಂದಿಗೂ ಆಗದು ಒಂದು ವೇಳೆ ನಮ್ಮ ರಾಜ್ಯವು ಪರರ ಸ್ವಾಧೀನಕ್ಕೆ ಹೋದರೂ ಚಿಂತೆಯಿಲ್ಲಾ. ಸತ್ಯಮೂರುತಿಯಾದ ಮಹಾತ್ಮನನ್ನು ಅಡವಿಗೆ ಕಳಿಸುವ ಯೋಚನೆಯು ಮಾತ್ರ ಯಾವ ಕಾಲಕ್ಕೂ ಬೇಡ.

ಅರ್ಜುನ:— ಶಹಬಾಶ ನೀನೊಬ್ಬಳು, ಈಗ ನೀನು ಹೊಗಳುತ್ತಿರುವ ಧರ್ಮಮೂರುತಿಯು ಸಹೋದರಿಯಾಗಿ ಜನ್ಮಿಸಿದ್ದರೆ ಪಾಂಡವರ ಸತ್ಯಪ್ರಕಾಶಕ್ಕೆ ಮತ್ತಿಷ್ಟು ಶೋಭೆ ಬರುತ್ತಿತ್ತು. ಆಗಲಿ ತಾಯಿ ಹೀಗೆ ಮಾಡಿದರೆ ಹೇಗೆ.

ಉತ್ತರೆ:— ಹೇಗೆ ಹೇಳು.

ಅರ್ಜುನಃ— ಈಗ ನಿಮ್ಮಲ್ಲಿ ದಾಸಿಯಾಗಿರುವ ಸೈರಂಧ್ರಿಯನ್ನು ನನಗೆ ಗುಪ್ತವಾಗಿ ಭೆಟ್ಟಿಮಾಡಿಸಿದರೆ

ಉತ್ತರೆ:— ಒಳ್ಳೇದು ಮಾಡಿಸಿವೆ —ಮುಂದೆ ?

**ಅರ್ಜುನ**— ಅವಳ ಗಂಡಂದಿರೈವರಿರುವರೆಂದೂ, ಪರಾಕ್ರಮದಲ್ಲಿ ಮಹಾ ಬಲಾಢ್ಯರೆಂದೂ ತಾವೂ ಕೇಳಿದಿರಿ. ನಾನೂ ಕೇಳಿದ್ದೇನೆ

**ಉತ್ತರೆ:** — ಹೌದು

**ಅರ್ಜುನ:**— ನಾನು ಅವಳಿಗೆ ಉಪಾಯದಿಂದ ಹೇಳಿ, ಅವಳ ಗಂಡಂದಿರು ಯುದ್ಧಕ್ಕೆ ಬರುವಂತೆ ಏರ್ಪಡಿಸುತ್ತೇನೆ. ಮತ್ತೂ ನಿಮ್ಮಲ್ಲಿ ಅಡಿಗೆಯ ಮನುಷ್ಯನಿರುವನಲ್ಲಾ, ಬಾಣಸಿಗ ಅವನು ಪಾಂಡವರಲ್ಲಿ ಬಲಾಢ್ಯನಾದ ಭೀಮನೆಂಬುವವನ ಕೂಡ ಗರಡಿಯಾಡಿರುವನಂತೆ ಮತ್ತೂ ದೇವನಿರ್ಮಿತವಾದ ವೃಕ್ಷಗಳನ್ನು ಬುಡ ಸಹಿತ ಕೀಳುತ್ತಿದ್ದನಂತೆ. ಅವನನ್ನು ಪ್ರೋತ್ಸಾಹಿಸಿ ಒಟ್ಟಿಗೆ ಇವರೆಲ್ಲರನ್ನು ಕಳುಹಿಸಿದರೆ ಕೌರವರ ಹೆಸರು ಹುಡಿಕಿದರೂ ಸಿಗುವದಿಲ್ಲಾ. ಯೋಚಿಸಿರಿ ಬೇಕಾದರೆ.

**ಉತ್ತರೆ:**— ಯೋಚಿಸುವದೇನು ಸಮಯಕ್ಕೆ ಸರಿಯಾಧ ಸಲಹೆ ಈ ಕೆಲಸವನ್ನು ಈಗಲೇ ಮಾಡಿಬಿಡುತ್ತೇನೆ. ನೀನು ಮಾತ್ರ ನಿನ್ನ ಕಾರ್ಯವನ್ನು ಕೊನೆಗಾಣಿಸು.

**ಅರ್ಜುನ:**— ದೇವಿಯವರೇ ಗುಪ್ತಸ್ಥಳಕ್ಕೆ

**ಉತ್ತರೆ:**— ಸೈರಂಧ್ರಿಯನ್ನು.

**ಅರ್ಜುನ:**— ಹೌದು.

**ಉತ್ತರೆ:**— ಆ ಕೆಲಸ ನನ್ನದು. ( ಹರುಷದಿಂದ )

ತ್ರಿತಾಳ, ಪದ. ರಾಗ, ತೆಲಂಗ

ಬ್ರಹನ್ನಳೇ ನಾಸೈರಿಸೇ । ಸಮಯೋಚಿತ ಪಥ ಗೈದ ಹರುಷವ ॥ ಭರದಿಯ ಲಲನಾ । ಬೋಧಿಸಿ ಕಳಿಸುವೆ । ಹರುಷದಿ ಸಮರಕೆ । ಸಲಹೆಗಾರರ

( ಹೋಗುವಳು )

**ಅರ್ಜುನ:**— ವಿನಾಶಕಾಲೆ ವಿಪರೀತಬುದ್ಧಿ ಎಂಬಂತೆ. ಕೌರವರಿಗೆ ವಿರಾಟನಗರವನ್ನು ಮುತ್ತುವ ಬುದ್ಧಿ ಹುಟ್ಟಿದ್ದೊಂದು ಅನುಕೂಲವೆ ಸರಿ. ಆದರೆ ಕೌರವರು ಪಾಂಡವರನ್ನು ಶೋಧಮಾಡಿ ಪುನಃ ವನವಾಸಕ್ಕೆ ಕಳಿಸಬೇಕೆಂಬ ದುರುದ್ದೇಶದಿಂದ ಯುದ್ಧ ಹೂಡಿರುವರೇ ಹೊರತು ವಿರಾಟ

ರಾಯುಸಿಗಾಗಿ ಇಲ್ಲಾ. ಪಾಪ ನಿಜವಿಚಾರ ಮಾಡಿದರೆ ವಿರಾಟರಾಯನು ನಿರಪರಾಧಿ. ಮಾಡಿದವರ ಪಾಪವು ಆಡಿದವರ ಬಾಯಲ್ಲಿ ಎಂಬಂತೆ ವಿರಾಟರಾಯನು ನಮಗೆ ಆಶ್ರಯಕೊಟ್ಟು ತಾನು ಸಂಕಟದಲ್ಲಿ ಬಿದ್ದಂತಾಯಿತು ಆಗಲಿ ರಾಜಾ ವಿರಾಟಾ ಒಂದು ಕಡೆಗೆ ನೋಡುತ್ತಾ ) ಸತ್ಯ ಪಕ್ಷಪಾತಿಗಳಾದ ಪಾಂಡವರು ನಿನ್ನ ಕೂದಲೆಳೆಗೆ ದಕ್ಕೆಯಾಗದಂತೆ ಕಾಪಾಡುವ ಕಾರ್ಯ ನಮ್ಮದಾಗಿದೆ. ಬೇಸಿಗೆಯ ಕಾಲದಲ್ಲಿ ಅಡವಿಗೆ ಒಂದು ಭಾಗದಿಂದ ಹತ್ತಿದ ಬೆಂಕಿಯು ಕ್ಷಣಮಾತ್ರದಲ್ಲಿ ಇಡೀ ಅಡವಿಯನ್ನೇ ಮುತ್ತಿ ಭಸ್ಮವಾಡುವಂತೆ ಆ ಪಾಪಿಗಳಾದ ಕೌರವರ ನೆತ್ತರದಿಂದ ನಿನ್ನ ಅರಮನೆಯ ಮುಂಭಾಗಕ್ಕೆ ಥಳಿಹಾಕಿಸುವೆವು ಆ ಕೌರವರ ಹೆಣಗಳ ರಾಶಿಯನ್ನೊಟ್ಟಿಸಿ ನರಿ, ನಾಯಿಗಳಿಗೆ ಹಂಚಿ ಹಬ್ಬವನ್ನು ಮಾಡಿಸುವೆವು ( ಎಂದು ಮುಂದೆ ಬರುವಷ್ಟರಲ್ಲಿ ವಿರಾಮನು ಅವಸರದಿಂದ ಬಂದು )

ವಿರಾಮ:— ಬ್ರಹನ್ನಳೇ ಯುವರಾಜರು. ವಿಶ್ರಾಂತಿಗಾಗಿ ಈ ಕಡೆಗೆ ಬರುತ್ತಿರುವರು.

ಅರ್ಜುನಃ— ಯುದ್ಧ ಸಮಯದಲ್ಲಿ ವಿಶ್ರಾಂತಿಮಂದಿರ ! ಇವನಲ್ಲವೆ ನಿಜವಾದ ಕ್ಷತ್ರಿಯನು. ಥೂ ನಿರ್ಲಜ್ಜಾ ನನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗನಾಗಿದ್ದರೆ ಜೀವಂತವಾಗಿ ಸುಡಿಸಿ ಬೂದಿಯು ಸಹ ಸಿಗದಂತೆ ಮಾಡಿ ಬಿಡುತ್ತಿದ್ದೆ.

( ಇಷ್ಟರಲ್ಲಿ ಉತ್ತರನು ಒಳಗಿಂದ ಬರುತ್ತಾ )

ಉತ್ತರಃ— ಎಲ್ಲಿಯ ತ್ರಿಗರ್ತಾ ಎಲ್ಲಿಯ ಕೌರವ ಸ್ತ್ರೀಯರೆಂದರೆ ಜಗತ್ತಿನಲ್ಲಿ ಜಗಳದಬೇರು ಒಂದಕ್ಕೆ ಹತ್ತುಮಾಡಿ ಹೇಳಿ ಗಂಡಸರನ್ನು ರೇಗಿಸಿ ಪರರ ಸಂಗಡ ಜಗಳಕ್ಕೆಹಚ್ಚಿ ಮನೆಯಲ್ಲಿ ಕವಡಿ ಆಟವಾಡುತ್ತಾ ತಣ್ಣಗೆ ಕುಳಿತುಕೊಳ್ಳುವರು ಬ್ರಹನ್ನಳೆ ದುರ್ಯೋಧನನನ್ನು ಜನರು ಹೊಗಳುವದು ಮಾತ್ರವೇ ನನ್ನ ದೃಷ್ಟಿಯಿಂದ ಅವನಿಗೆ ಒಂದು ದುಡ್ಡಿನ ಬೆಲೆಯನ್ನು ಕೂಡಾ ಕೊಡುವದಿಲ್ಲಾ. ಇನ್ನು ಕರ್ಣಾ ಅವನೇನು ಮಹಾ ಹೇಳೀಕೇಳಿ ಅಂಬಿಗರಲ್ಲಿ ಬೆಳೆದವನು ಅವನ ಪೌರುಷವೆಲ್ಲವೂ ಹೊಳೆಯಲ್ಲಿ. ಅಂದ ಮೇಲೆ ನಾನು ಆ ಕರ್ಣನಿಗೆ ಒಂದು ಕವಡಿ ಕಿಮ್ಮತ್ತನ್ನು ಸಹ ಕೊಡುವದಿಲ್ಲಾ ಆ ! ಏನು ಬ್ರಹನ್ನಳೇ ಮಾತಾಡು.

**ಅರ್ಜುನಃ**— ಮಾತಾಡುವದಕ್ಕೆ ಆಗುವದಿಲ್ಲಾ ಬುದ್ಧಿ.

**ವಿರಾಮಃ**— ಪಾಪನಿಜ ದೊಡ್ಡೋರಿದುರಿಗೆ ಮಾತಾಡೋದು ಬಹು ಕಷ್ಟ. ಅದರಲ್ಲಿ ಸಾರ್ವಭೌಮ ಸಮ್ರಾಟ ಜಗದೇಕ (ಸ್ವ) ಈ ರಾ........

**ಉತ್ತರಃ**— ಒಪ್ಪಿದೆ ವಿರಾಮ ನಿನ್ನ ಮಾತಿಗೆ ಮನಸ್ಸಿನಿಂದ ಒಪ್ಪಿದೆ.

**ಅರ್ಜುನಃ** ಒಳ್ಳೇದು ಯುವರಾಜ ಕೌರವರನ್ನು ಕಾಳಗದಲ್ಲಿ ಕಂಗೆಡಿಸಿದ ಆ ಪಾಂಡವರ ವಿಷಯದಲ್ಲಿ ತಮ್ಮ ಅಭಿಪ್ರಾಯವೇನಿದೆ.

**ಉತ್ತರಃ** – (ನಕ್ಕು) ಅಯ್ಯೋ ಪಾಪ ಪಾಂಡವರ ನೆನಪಾಯಿತೆಂದರೆ ಮನಸ್ಸಿಗೆ ಬಹಳ ವ್ಯಸನವಾಗುತ್ತಿದೆ ಭಿಕ್ಷುಕರಂತೆ ಹೊಟ್ಟೆಗಿಲ್ಲದೆ. ಬಟ್ಟೆಗೆ ಗತಿಯಿಲ್ಲದೆ ಬಹುಪರಿಯಾಗಿ ಬಳಲುತ್ತಿರುವ ಆ ಬಡ ಪಾಂಡವರದೇನು ಪಾಪ ನಾನು ಅವರನ್ನು ಲೆಕ್ಕದಲ್ಲಿಯೇ ಹಿಡಿದಿಲ್ಲಾ.

**ಅರ್ಜುನ**— ಬುದ್ಧಿ ಆ ಅರ್ಜುನ ಮತ್ತು ಭೀಮ ಇವರ ವಿಷಯವಾಗಿ ತಮ್ಮ ಅಭಿಪ್ರಾಯವೇನಿದೆ.

**ಉತ್ತರಃ**—( ನಕ್ಕು ) ಬ್ರಹನ್ನಳೇ ಹುಲಿಯ ಬಾಯಿಯಿಂದ ನರಿಯ ಪರಾಕ್ರಮವನ್ನು ಹೊಗಳಿಸಿದಂತೆ ನನ್ನ ಬಾಯಿಂದ ಏಕೆ ಹಿಯ್ಯಾಳಿಸುವದಕ್ಕೆ ಹಚ್ಚುವೆ. ಅವನ ಪರಾಕ್ರಮವೆಲ್ಲವೂ ಅಡಿಗೆಯ ಮನೆಯಲ್ಲಿ ಇನ್ನು ಅರ್ಜುನ. ಬಳೆತೊಟ್ಟ ಹೆಂಗಸರನ್ನು ಸಹ ಜೈಸಲಾರದ ಆವನೊಬ್ಬ ಗಂಡು ಇನ್ನು ನಕುಲಸಹದೇವ ಆಯ್ಯೋ ಏನೊಂದೂ ತಿಳಿಯದ ದನಗಾಯಿಗಳು. ಪಾಪ ಪಾಪ ಅಯೋ್ಯಪಾಪ ಸಣ್ಣ ಸಣ್ಣ ಪಣ್ಣ ಸಣ್ಣ ಮಕ್ಕಳಾಟದ ಗೊಂಬೆಗಳು. ಬ್ರಹನ್ನಳೆ ಇನ್ನು ಪಕ್ಷಪಾತವಿಲ್ಲದೆ ಹೇಳಬೇಕೆಂದರೆ ಪಾಂಡವರು ಕೌರವರನ್ನು–ಗೆಲೆಯುವದಕ್ಕಾಗುವದಿಲ್ಲವೆಂಬುದನ್ನು–ತಿಳಿದೇ ವನವಾಸಕ್ಕೆ ಹೋದರೇ ವಿನಹ ನಿಜವಾಗಿ ಅಲ್ಲಾ. ತಿಳಿಗೇಡಿ ಜನರು ಸುಮ್ಮನೆ ಹೇಳುತ್ತಾರಷ್ಟೆ. ಕೌರವರು ರಾಜ್ಯವನ್ನು ಮೋಸದಿಂದ ಕಸಿದುಕೊಂಡು ಅಡವಿಗಟ್ಟಿದರೆಂದು ವಿರಾಮಾ ನಿಜವಾಗಿಹೇಳು. ಆ ಅರ್ಜುನ ಮತ್ತೂ ಆ ಗೊಡ್ಡಿ ಭೀಮಾ ನನ್ನ ಮುಂದೆ ನಿಲ್ಲುವದಕ್ಕಾದಿತೇನೋ ಹೇಳು. ಪ್ರಮಾಣಮಾಡಿ ನಿಮ್ಮ ಕುಲದೇವರನ್ನು ಸ್ಮರಿಸಿ ದೇವರಾಣೆಮಾಡಿ ಸತ್ಯವಾಗಿ ನಿಜವಾದದ್ದನ್ನು ಹೇಳು.

**ವಿರಾಮಃ**—ಬುದ್ಧಿ ಈಗ ತಾವು ಕೇಳಿದ ವಿಷಯವನ್ನು ನನ್ನ ತಂದೆ ತಾಯಿ ಪಿತೃಪಿತಾಮಹ ಪ್ರಪಿತಾಮಹರನ್ನು ಸ್ಮರಿಸಿ ನನ್ನ ಬಕ್ತಿಯ ವಿಶ್ವಾಸದ ಸಂಪೂರ್ಣ ನಂಬಿಗೆಯ ಪರಮೇಶ್ವರ ವಿಷ್ಣು, ಬ್ರಹ್ಮ, ಪಿನಾಕಿ ಪುರಾರಿ, ಶಂಕರ, ಶಂಭು, ಶಿವ, ಮಹಾದೇವ, ಹರಿ, ಮುರಾರಿ, ಮುಕುಂದ ಮುರಮರ್ಧನ.

**ಉತ್ತರಃ**— ವಿರಾಮ ನಿಲ್ಲಿಸು. ನಿನ್ನ ಪ್ರಮಾಣದಪಟ್ಟಿಯನ್ನು.

**ವಿರಾಮಃ**— ಆಗೋದಿಲ್ಲಾ ಬುದ್ಧಿ ನಾಲಿಗೆಗೆ ರುಚಿಹತ್ತಿದೆ.

**ಉತ್ತರಃ**— ವಿರಾಮ ಬಹಳದೂರ ಬಂದೆ.

**ವಿರಾಮಃ**—ಹೌದು ಬುದ್ಧಿ ಊರೇಬಂದಿಲ್ಲಾ ಇನ್ನೂ ದೂರ ಅದೆ.

**ಉತ್ತರಃ**— ಮುಟ್ಟಿಸಿ ಬಿಡು ಹಾಗಾದರೆ.

**ವಿರಾಮಃ**— ಲಕ್ಷ್ಮೀರಮಣ, ಗೋಪೀರಮಣ, ರಾಧಾರಮಣ ಈ ಹಿಂದೆ ಹೇಳಿದ ಯಾವತ್ತೂ ಸರ್ವಸಮಸ್ತ ಸಪ್ತಋಷಿಗಳ್ನು ಸ್ಮರಿಸಿ ಸತ್ಯವಾಗಿ ಹೇಳುವೆ. ತಮ್ಮಂತಹ ಮನೆ ಪರಾಕ್ರಮಿಗಳ ಮುಂದೆ ನಿಲ್ಲುವದಕ್ಕೆ ಯಾರಿಂದಲೂ ಸಾಧ್ಯವಿಲ್ಲಾ.

**ಅರ್ಜುನಃ** - ಕುಮಾರಾ. ಮುತ್ಸದ್ದಿಗಳೂ ಸ್ವರಾಜ್ಯ ಸ್ಥಾಪನೆಗೆ ಕಾರಣರೂ ಆದ ದ್ರೋಣ ಮತ್ತೂ ಭೀಷ್ಮಾಚಾರ್ಯರ ವಿಷಯವಾಗಿ ತಮ್ಮ ಅಭಿಮತವೇನಿದೆ ಅದನ್ನಷ್ಟು ಹೇಳಿಬಿಡ.

**ಉತ್ತರಃ**— ಬೃಹನ್ನಳೇ ಈ ವಿಷಯದಲ್ಲಿ ಮಾತ್ರ ನನ್ನ ಬಾಯಿಂದ ಏಕೆ ಆಡಿಸುವೆ. ಸುಮ್ಮನೆ ಪಾಪಕ್ಕೆ ಗುರಿಯಾಗ ಬೇಕಾಗುತ್ತದೆ. ಪಾಪ ಆ ಮುದುಕರ ಸುದ್ದಿಯೇ ಬೇಡ.

**ವಿರಾಮಃ**—ಬೃಹನ್ನಳೆ ಸುಮ್ಮನೆ ನೀನು ಕೇಳುವದಷ್ಟೆ. ಜಗತ್ತಿನೊಳಗಿನ ಯಾವ ವೀರರೂ ಅವರ ಮುಂದೆ ನಿಲ್ಲುವಹಾಗಿಲ್ಲಾ. ಅಂದ ಮೇಲೆ ಪ್ರಯೋಜನವೇಯಿಲ್ಲಾ.

**ಅರ್ಜುನಃ**—ಅಂತೂ ಆ ಭೀಷ್ಮದ್ರೋಣರ ಪರಿಚಯವು ತಮಗೆ ಸಂಪೂರ್ಣ ಇದ್ದಹಾಗಾಯಿತು.

ಉತ್ತರಃ—ಬ್ರಹನ್ನಳೆ ನಿಜವಾಗಿ ಹೇಳ ಬೇಕೆಂದರೆ ನಾನು ಪರಿಚಯಮಾಡಿ ಕೊಳ್ಳುವದೇ ಕಡಿಮೆ.

ವಿರಾಮಃ—ಅದೇ ದೊಡ್ಡವರ ಲಕ್ಷಣ.

ಅರ್ಜುನಃ— ಕುಮಾರ ಜನರು ನಿಮ್ಮ ಪರಾಕ್ರಮುವನ್ನು ಏಕೆ ಹೊಗಳುವದಿಲ್ಲಾ.

ಉತ್ತರಃ—ಅಂತಹ ಪರಾಕ್ರಮದ ಗೊಂದಲಕ್ಕೆ ಹೋಗಿಲ್ಲಾ.

ವಿರಾಮಃ—ವಿಶ್ರಾಂತಿ ಮಂದಿರವನ್ನೇ ಬಿಟ್ಟಿಲ್ಲಾ.

ಉತ್ತರಃ—ಬ್ರಹನ್ನಳೆ ಇದು ವರೆಗೆ ಕ್ಷತ್ರಿಯ ಧರ್ಮದ ವಿಚಾರವೇ ಗೊತ್ತಿಲ್ಲಾ ಒಬ್ಬರಿಗೂ.

ವಿರಾಮ:—ತಮ್ಮನ್ನು ಬಿಟ್ಟು.

ಅರ್ಜುನಃ—ಅಂದರೆ ನನಗೆ ತಿಳಿಯಲಿಲ್ಲಾ.

ಉತ್ತರಃ—ಕ್ಷತ್ರಿಯ ಧರ್ಮವೆಂದರೆ ಸ್ನಾನಾ ಸಂಧ್ಯಾವಂದನೆ ಸರಿಯಾದ ವೇಳೆಗೆ ಭೋಜನ ನಿದ್ರೆ, ಸಂಗಿತ, ಸ್ವತಹ ನರ್ತನ ಯುದ್ಧ ಸಮಾಚಾರವನ್ನು ಇದ್ದಲ್ಲಿಯೇ ಕೇಳುವದು. ಇದು ನಿಜವಾದ ಕ್ಷತ್ರಿಯ ಧರ್ಮ

ವಿರಾಮಃ—ತಂದೆ ತಾಯಿಗಳ ಕರ್ಮ ಇದೇ ಹೇಡಿಗಳ ಮರ್ಮ.

ಉತ್ತರಃ—ಶತ್ರುಗಳು ಮುತ್ತಿಗೆ ಹಾಕುವದಕ್ಕಿಂತ ಮೊದಲು ಧನುರ್ಬಾಣಗಳನ್ನು ಹಿಡಿಯುವದು. ಧರ್ಮವಿರೋಧ ಅದಕ್ಕನು ಸಾರವಾಗಿ ಬಾಣವನ್ನು ಹಿಡಿಯುವದೇ ಇಲ್ಲಾ. ಹಿಡಿಯಬಾರದೆ ಹಿಡಿದೆ.

ವಿರಾಮಃ—ಉಳಿಯೋದೆಯಿಲ್ಲಾ ಜೀವಾ.

ಉತ್ತರಃ—ಯಾವ ಕಾಲಕ್ಕೆ ಏನಾಗುವದೋ ಅದನ್ನು ಬಾಯಿಂದ ಹೇಳುವದಕ್ಕೆ ಸಾಧ್ಯವಿಲ್ಲಾ. ( ವೀರಾವೇಶದಿಂದ ) ವಿರಾಮಾ ಸರಿಹಿಂದಕ್ಕೆ ಎಲೋ ದುಷ್ಟಕ್ಷತ್ರಿಯರೇ ಬನ್ನಿ ಯಾರು ಬರುವಿರಿ ನನ್ನೆದುರಿನಲ್ಲಿ. ನನಗೆ ಕನಿಕರವೆಂಬುದೇಯಿಲ್ಲಾ ಆದರೆ ವ್ಯರ್ಥವಾಗಿ ಭಾರತೀಯರಾದ ನಮ್ಮ ನಮ್ಮವರ ಹೆಂಡಂದಿರು ವ್ಯರ್ಥವಾಗಿ ವಿಧವೆಯರಾಗುವರಲ್ಲಾ ಎಂಬ ಕನಿಕರದ ಕಳಕಳಿಯ ಮಾಯಬಂದು ಎದುರಿಗೆ ನಿಲ್ಲುವದು ಏನುಮಾಡಲಿ ಇದೊಂದು ದೊಡ್ಡ ಚಿಂತೆ.

ತಾಳ, ತ್ರಿತಾಳ ॥ ಪದ ॥ ರಾಗ, ಕಾನಡಾ

ಥಗ್‌ಥಗಾಯ ಮಾನವಾಗಿ ಅತಿರೇಕದಿ ಉರಿಯುವದೆನ್ನೊಡಲೊ । ದುಷ್ಟ ಕ್ಷತ್ರಿಯರ ನಡುಗಿಸಿಬಿಡುವೆ । ಗುಡುಗಿನಂದದಿ ಭಯವಿಡುವೆ । ವೃದ್ಧರಾದ ಗುರುದ್ರೋಣ ಭೀಷ್ಮರ । ಹದ್ದಿನಂದದಿ ಹಾರಿಸುವೆ ।

( ಕತ್ತಿಯನ್ನು ಹಿರಿದು ಕೊಂಡು ಹೋಗುವನು. ರಸ್ತಾಪರದೆಯು ಬೀಳುವದು )

## ೪ನೇ ಪ್ರವೇಶ

( ಅರ್ಜುನನು ರಸ್ತಾಪರದೆಯ ಮುಂದೆ ಬರುವನು. )

**ಅರ್ಜುನ:** — ದೇವಾ ಕಪಟನಾಟಕಸೂತ್ರಧಾರಿಯಾದ ನಿನ್ನ ಮಾಯಾಲೀಲೆಗಳನ್ನು ಕಂಡುಹಿಡಿಯುವದು ನಮ್ಮಿಂದ ಸಾಧ್ಯವೇ ? ತಪಸ್ವಿಗಳಿಗೂ, ಅಗೋಚರನಾಗದಿರುವ ನೀನು, ಪ್ರಪಂಚವೆಂಬ ಈ ಸಂಸಾರ ಬಂಧನ ನಾಟಕದಲ್ಲಿ, ಮೋಹಪರವಶರಾಗಿ ತೊಳಲುತ್ತಿರುವ ನಿನ್ನ ಭಕ್ತರನ್ನು ಎಚ್ಚರಿಸುವದಕ್ಕಾಗಿ ಆಗಾಗ್ಗೆ ಅವತಾರಗಳನ್ನೆತ್ತಿ ಸಂಕಟಗಳನ್ನು ದೂರ ಮಾಡಿ ಭಕ್ತಪರಿಪಾಲಕನೆಂಬ ನಿನ್ನ ಪವಿತ್ರನಾಮವನ್ನು ಈ ಕರ್ಮಭೂಮಿಯಲ್ಲಿ ಸ್ಥಿರಗೊಳಿಸಬೇಕೆಂಬ ಸದುದ್ದೇಶದಿಂದ ಪ್ರಕಟನಾಗಿರುವೆಯಲ್ಲವೆ ? ಪ್ರಭೋ, ನೀನು ಜನಿಸಿದುದರಿಂದಲೇ ಯದುಕುಲವು ಪವಿತ್ರವಾಯಿತು. ನಿನ್ನ ಪಾದವಿನ್ಯಾಸದಿಂದಲೇ ಮಧುರಾಪುರವು ಶೋಭೆಗೊಂಡಿತು. ಯಾವ ಪಟ್ಟಣದಲ್ಲಿಯ ಪ್ರಜಗಳು ಸದಾ ನಿನ್ನ ದರ್ಶನದಿಂದ ಮಹದಾನಂದವನ್ನು ಅನುಭವಿಸುತ್ತಿರುವರೋ, ಯಾವ ಪಟ್ಟಣವು ನಿನ್ನ ಸತ್ಯವಾಸದಿಂದ ಸ್ವರ್ಗಕ್ಕಿಂತಲೂ ಅತಿಶಯವಾದ ಪ್ರಭಾವವನ್ನು ಹೊಂದಿರುವದೋ, ಆ ದ್ವಾರಕಾ ಪುರಿಯೊಂದೇ ಈ ಸಮಸ್ತ ಭೂಮಿಗೂ ಮಿಗಿಲಾದ ಪಟ್ಟಣವು ಇಂತಹ ಮಹಾಮಹಿಮನಾದ ನಿನ್ನ ಪ್ರಾಣಸಖ ಪಾರ್ಥನಿಗೆ ಅವುದೋ ಜನ್ಮಾಂತರದ ದ್ವೇಷವನ್ನು ಕೊಟ್ಟು ಕೈಲಾಗದ ಹೇಡಿಗಳಿಂದ ಕಂಡಕಂಡ ಹೀನಮಾತುಗಳನ್ನಾಡಿಸಿಕೊಂಡು ಪರದಾಸ್ಯದಲ್ಲಿ ಬಿದ್ದು, ವನವಾಸ ಅಜ್ಞಾತವಾಸವೆಂಬ ಕಷ್ಟದಲ್ಲಿ ತೊಳಲುತ್ತಾ ಮುಂದೆ ಮಾರ್ಗವೇನೆಂಬುದನ್ನು ಅರಿಯದೆ ನರಳುತ್ತಿರುವ ಭಾರತಪುತ್ರರಾದ ಬಡ ಪಾಂಡವರಿಗೆ ಬೇಗ ಮಾರ್ಗವನ್ನು ತೋರಿಸಿ. ಸತ್ಯ ವಚನಗಳಿಂದ ಹೆಸರನ್ನು ಶಾಶ್ವತಗೊಳಿಸು ಇಷ್ಟೇ ನನ್ನ ಪ್ರಾರ್ಥನೆ.

ಆದಿತಾಳ, ಪದ. ರಾಗ, ಕರ್ನಾಟಕಿ ಖಮಾಜ

ಪೊರೆಯ್ಯೊ ಪರಮಾತ್ಮ ಸಖರಾ | ಸುತರಾ | ಹಿತದಾವರ | ನಿತ್ಯಾನಂದ ಸುವರಾ | ಭಾಮಾವರ | ಅಯಿತ ಮಧುರ | ನಿಜ ಭಕುತರ | ಗೋಪೀವರ।

( ಪದವನ್ನು ಅನ್ನುತ್ತಾ ಹೋಗುವನು. ವಿರಾಮನು ಅದೇ ರಸ್ತೆ ಪರದೆಯ ಮುಂದೆ ಪ್ರವೇಶಿಸುವನು. )

**ವಿರಾಮಃ**—ಬಾಯಿದ್ದವರಿಗೆ ಕೈಯಿಂದ ಏನೂ ಆಗುವದಿಲ್ಲವೆಂಬ ಮಾತು ಸುಳ್ಳಲ್ಲ ನೋಡಿ ನಮ್ಮ ಕುಮಾರ ಒಂದು ಗರಗಳಿಗೆ ವಿಶ್ರಾಂತಿ ಕೊಡುವದಿಲ್ಲಾ ನಿಜವಾಗಿ ವಿಚಾರಮಾಡಿದರೆ ಕೆಲಸವೇನೂ ಇಲ್ಲಾ ಮಹಾರಾಯ ಯಾವ ನಕ್ಷತ್ರದಲ್ಲಿ ಹುಟ್ಟಿರುವನೋ ದೇವರಿಗೇಗೊತ್ತು. ಗಂಡಸರಲ್ಲಿ ರತಕ್ಕ ಗುಣಗಳೊಂದೂಯಿಲ್ಲಾ ಹುಟ್ಟಿರುವದು ಮಾತ್ರ ರಾಜಮನೆತನ ಲೋಕದಲ್ಲಿ ಒಳ್ಳೇ ಮಕ್ಕಳನ್ನು ಪಡೆಯುವದಕ್ಕೂ ಪುಣ್ಯಬೇಕು. ದುರ್ಮಾರ್ಗಿಗಳಾದ ಹತ್ತೆಂಟು ಹೇಡಿ ಮಕ್ಕಳಿರುವದಕ್ಕಿಂತಲೂ ಸನ್ಮಾರ್ಗ ಪ್ರವರ್ತಕನಾದ ಸುಪುತ್ರನೊಬ್ಬನಿದ್ದರೆ ಸಾಕು. ತಂದೆ ತಾಯಿಗಳಿಗೆ ಮರ್ಯಾದೆ ನಮ್ಮ ಕುಮಾರನಂತಹ ಹೇಡಿಯನ್ನು ಪಡೆಯುವದಕ್ಕಿಂತಲೂ ತಾಯಂದಿರು ಬಂಜೆಯರಾಗಿರುವದು ಬಹಳ ಉತ್ತಮ. ನಮ್ಮ ಯುವರಾಜನನ್ನು ನೋಡಿದವರಿಗೆ ಹೇಡಿಯೆಂಬುದು ಕೂಡಲೇ ಗೊತ್ತಾಗುತ್ತಿದೆ. ಮುತ್ತಲ ಹೂವು ಯಿದ್ದ ಹಾಗೆ ಕಾಣುವವಕ್ಕೆ ಅಲಂಕಾರ ಪ್ರಯೋಜನ ಏನೂಯಿಲ್ಲಾ. ರಾತ್ರಿ ಹೊರಗೆ ಹೋಗುವ ಪ್ರಸಂಗ ಬಂದರೆ ಜೊತೆಯಲ್ಲಿ ನಾಲ್ಕೆಂಟು ಮಂದಿ ಬೇಕು. ಇಂತಹ ಹೇಡಿಯು ಗಂಡುಗಲಿಗಳಾದ ಪಾಂಡವರನ್ನು ಜಗದೇಕ ವೀರರಾದ ಭೀಷ್ಮ ದ್ರೋಣಾದಿಗಳನ್ನು ಮನಬಂದ ಹಾಗೆ ಮಾತಾಡಿ ಬಿಟ್ಟನಲ್ಲಾ ಈ ಮಾತಿನ ಮಲ್ಲಾ ಇವನಿಗೆ ಮುಂದೆ ಆಗುವದನ್ನು ದೇವರೇ ಬಲ್ಲಾ ಕ್ಷಿಪ್ರದಲ್ಲಿಯೇ ಅಡಗುವದು ಇವನಸೊಲ್ಲಾ

ತಾಳ ಏಕತಾಳ, ಪದ ರಾಗ ಕೇದಾರ ಗೌಳ,

ಸಕಲದೇಶದ ರಾಜರ ವಳಗೆ | ಹೇಡಿಯಾಗಿಹನಿವನೊಬ್ಬ | ಸರಸವಾಗಿಹ ಅರಸರವಳಗ ‖ ಅಗಸನಾಗಿಹನಿವನೊಬ್ಬ | ಇಲಿಯನು ಕಂಡರೆ ಕತ್ತಿಯ ಹಿರಿವಾ | ಹುಲಿಯನು ಕಂಡರೆ ಮೂಲಿಯ ಹಿಡಿವಾ | ನಾರಿಯರೆದುರಲಿ ಮೀಸೆಯ ತಿರುವವ ] ಹೇಸಿಹೇಡಿಯು ಇವನೊಬ್ಬಾ ‖ ಭಾರತ ಭೂಮಿಗೆ

ಭಾರವಾಗಿಹ ಬಡಬಡಿಕೆಯ ಕುವರನಿವನ್ನೊಬ್ಬ ॥ ದುಡುಕುತನದಲಿ ಮೂಲೆಯ
ಹಿಡಿಯುವ ॥ ನಾಡಿನ ಹೇಡಿಯು ಇವನೊಬ್ಬ ॥

( ಪದವನ್ನು ಹೇಳಿ ಮುಂದೆ ಬರುವಷ್ಟರಲ್ಲಿ ಎದುರಿಗೆ ಕಳಿಂಗನೆಂಬ ಸೇವಕನು ಎದುರಿಗೆ ಬಂದು )

**ಕಳಿಂಗ:**— (ಅವಸರದಿಂದ) ಮಿತ್ರಾ ವಿರಾಮಾ, ವಿರಾಟನಗರವು ಪರರ ಸ್ವಾಧೀನವಾಯಿತು.

**ವಿರಾಮು**—ಎಂದು ಹೊರಡೋಣ.

**ಕಳಿಂಗ:**—ಎಲ್ಲಿಗೆ ?

**ವಿರಾಮು.**—ಎರಡನೇ ರಾಜಧಾನಿಗೆ.

**ಕಳಿಂಗ:**—ಮುಂದೆ ಗೋವುಗಳ ಗತಿಯೇನು ?

**ವಿರಾಮು:**—ಗತಿಯೇನ ಗತಿ ಶಿವನೇಗತಿ.

**ಕಳಿಂಗ:**—ಮಿತ್ರಾ ಗೋವುಗಳನ್ನು ಬಿಡಿಸಿ ತರುವದಕ್ಕೆ ನಮ್ಮ ಯುವರಾಜರನ್ನು ಕಳಿಸಿದರೆ ?

**ವಿರಾಮು:**—ಪೊಳ್ಳತನ್ನೋ ಮಹಾರಾಯಾ.

**ಕಳಿಂಗ:**—ಯಾಕೆ ?

**ವಿರಾಮು:**—ಅವನ ಪರಾಕ್ರಮ ಗುಟ್ಟು ನನಗೇಗೊತ್ತು. ಅವನಿಗೇ ಗೊತ್ತು ಹೀಗೆಮಾಡು ನೆಟ್ಟಗೆ ಅರಮನೆಗೆಹೋಗಿ ಉತ್ತರಾ ತಾಯಿಯವರಿಗೆ ಭೆಟ್ಟಿಯಾಗಿ ಅವರಿಗೆ ಈ ಸಂಗತಿಯನ್ನು ತಿಳಿಸಿ ಸುಧೇಷ್ಣಾ ಮಹಾರಾಣಿಯವರನ್ನು ಕರೆದುಕೊಂಡು ವಿಶ್ರಾಂತಿ ಮಂದಿರಕ್ಕೆಬಾ. ನಾನು ನಮ್ಮ ಭೂಪತಿಯನ್ನು ಯಲ್ಲಿಯೂ ಬಿಡದಹಾಗೆ ಕಾವಲಾಗಿರುತ್ತೇನೆ.

( ಕಳಿಂಗನು ಹೋಗುವನು )

**ವಿರಾಮು:** ( ಒಳಗಡೆ ನೋಡಿ ) ಬಂತೋ ಮಹಾರಾಯಾ ನಿನಗೆ ಅಂತ್ಯಕಾಲಾ. ಅಂತಿಂತಾ ಮಾತು ಕಂಠಲ್ಲೇ ಆಡುತ್ತಾ—ಹಂಟುಹೊಡೆಯುತ್ತಿದ್ದೆಯಲ್ಲಾ ಈಗ ನಿನ್ನ ಸೊಂಟಮುರಿದು ಹೋಗುವದು. ಖಂಡಿತವಾಗಿ ಹೇಳುತ್ತೇನೆ. ಹಾಕಿಕೋ ಸೆರಗಿನಲ್ಲಿಗಂಟು. ಇದೇ ನಿನ್ನ ಅಂತ್ಯದ ಅಂಟು

ಏಕದಾಳ, ಪದ. ರಾಗ, ಜಂಜೂಟಿ

ಬಂತಲ್ಲೊ ಭೂಪಣ್ಣ ಅಂತ್ಯಕಾಲಾ। ಕುಂತಲ್ಲೆ ಕುಂತಗೊಂಡು। ಎಂತೆಂತು ಅಂತಿದ್ದಿ। ಸತ್ಯಸಂಧರನಿಂದೆ ಬಿಡದಲೆಮಾಡುತಿದ್ದೆ। ರಣರಂಗದೊಳು ನಿನ್ನ। ಮಣಿಮುಕುಟ ನಿಲ್ಲದು ॥ ( ಪದವನ್ನು ಅನ್ನುತ್ತಾ ಹೋಗುವನು. )

( ಅಂಕಪರದೆಯು ಬೀಳುವದು. )

# ೨ನೇ ಅಂಕು

## ೧ನೇ ಪ್ರವೇಶ

( ವಿಶ್ರಾಂತಿಮಂದಿರದ ದೃಶ್ಯ. ಅರ್ಜುನನು ಉತ್ತರನಿಗ ನಾಚುಕಲಿಸುತ್ತಿರುವ ಸಮಯದಲ್ಲಿ ಉತ್ತರೆಯುಬಂದು. )

**ಉತ್ತರ:—** ಬ್ರಹನ ಳೇ ಈ ಹೆಜ್ಜೆ ಹೆಜ್ಜೆಯು ಹಾಗೆ ಬೀಳುವದಿಲ್ಲಾ.

**ಕಳಿಂಗಃ—** (ನಮಸ್ಕರಿಸಿ) ವಿರಾಮಾ ಮಹಾರಾಣಿಯುವರು ಪರಿವಾರದೊಂದಿಗೆ ಇತ್ತ ಕಡಿಗೆ ದಯುಮಾಡಿಸಿದರು.

**ವಿರಾಮ:—** ಸಾರ್ವಭೌಮ, ಬಂದರು.

( ಇಷ್ಟರಲ್ಲಿ ಸುಧೇಷ್ಣಾ, ದ್ರೌಪದಿ, ದುಶ್ಶೀಲಾ ಬರುವರು. )

**ಉತ್ತರೆಃ—** (ಸಿಟ್ಟಿನಿಂದ) ವಿರಾಮಾ ಹೀಗೆ ಬಾ, ಇದೇ ಏನು ನಿಮ್ಮ ಉದ್ಯೋಗ. ಮೀಸೆಹೊತ್ತ ಗಂಡಸರಾದಮೇಲೆ ಮೀಸೆಗೆ ಮರ್ಯಾದೆ ಬೇಕು.

**ಉತ್ತರ:—** ಇದನ್ನು ತಿಳಿದೇ ಮೀಸೆಯುನ್ನು ಬಿಡಲಿಲ್ಲಾ.

**ವಿರಾಮ—** ಅಂದಮೇಲೆ ಈ ಮಾತು ನಮಗೆ ಹತ್ತುವದಿಲ್ಲಾ. ಮೆತ್ತಗೆ ಪ್ರಾರಂಭವಾಗಲಿ, ನರ್ತನ.

ತಾಳ, ದಾದರಾ ಪದ ರಾಗ

ಮೋಹದಪ್ರಿಯ ಬಾರೊ। ಮುಖವಾ ತೋರೋ

( ಎಂದು ಪದವನ್ನು ಅನ್ನುತ್ತಾ ಕುಣಿದು ಕಣ್ಣು ಮೂಗು ಮುರಿಯುವನು )

**ಉತ್ತರೆ:—** ಅಣ್ಣಾ ನೀನು ಕ್ಷತ್ರಿಯನಲ್ಲವೆ ?

**ಉತ್ತರ:—** ಬರೀ ಕ್ಷತ್ರಿಯನಲ್ಲಾ. ಹಾವಭಾವಗಳಿಂದಲೇ ವೈರಿಗಳನ್ನು ಮರುಳುಮಾಡಿ, ಶರಣುಬರುವಂತೆ ಮಾಡುವ ಕ್ಷತ್ರಿಯ.

**ವಿರಾಮ:—** ದೊಡ್ಡಕ್ಷತ್ರಿಯ ?

**ಉತ್ತರೆ:—** ಅಣ್ಣಾ ಕೌರವರು ನಮ್ಮ ರಾಜ್ಯವನ್ನು ಮುತ್ತಿ ತಂದೆಯವರನ್ನು ಸೆರೆಹಿಡಿದರಂತೆ.

**ಉತ್ತರ:—**( ಪೊಳ್ಳು ಪೌರುಷ ಮಾತಾಡುತ್ತಾ )ಏನು ನಮ್ಮ ರಾಜ್ಯವನ್ನು ಆ ಹೇಡಿ ಕುಲಗೇಡಿ ಕೌರವರು, ಮುತ್ತಿರುವರೇ ? ವಿರಾಮಾ ಬೇಗತಾ

ತ್ರಿತಾಳ, ಪದ ರಾಗ ಅಥಾಣ

ಕಡಿದಿಡುವೆ ವೈರಿ ಶಿರವ | ಅಡಿಗಡಿಗೆ ಕೇಡು ! ಬಗೆಯುವಾ ದುರುಳನ |
ಇಡುವೆ ವೈರಿ ಶಿರವಾ |

( ಎಂದು ಕಣ್ಣು ಕಿಸಿದು ಅಸ್ತವ್ಯಸ್ತನಾಗಿ ನಿಲ್ಲುವನು )

**ಸುಧೇಷ್ಣಾ:—** ನೋಡಿದೆಯಾ ವಿರಾಮ, ನನ್ನ ಮಗುವಿನ ವೀರಾವೇಶವನ್ನು ಎಷ್ಟೇ ಆಗಲಿ ಕ್ಷತ್ರಿಯನಲ್ಲವೆ ?

**ವಿರಾಮ:—**ಮಹಾರಾಣಿಯವರೇ ನಾನು ಮೊದಲೇ ತರ್ಕಮಾಡಿದ್ದೆ

**ಉತ್ತರೆ:—** ಏನೆಂದು ?

**ವಿರಾಮ:—** ಸಿಟ್ಟು ಬರೋದೆಯಿಲ್ಲಾ. ಬಂದರೆ ಉಳಿಯೋದಿಲ್ಲಾ ಅಂತಾ ದೇವಿಯವರೇ ? ಇದೇ ಮೊದಲನೇ ಕೋಪ. ಆದ್ದರಿಂದ ಒಂದು ಕುಂಬಳಕಾಯನ್ನು ( ನೆನಪುಮಾಡಿ ) ಅಲ್ಲಾ ತೆಂಗಿನಕಾಯನ್ನು ತಂದು ನಿವಾಳಿಸಿ ಒಗೆಯುತ್ತೇನೆ. ಪೀಡೆಏನಿದ್ದರೂ ಬಿಟ್ಟುಹೋಗಲಿ ( ಎಂದು ಕಾಯಿತಂದು ನಿವಾಳಿಸಿ ಒಗೆಯುವನು, ಉತ್ತರನು ಮಾತಾಡದೆ ಸುಮ್ಮನೆ ನಿಂತುಬಿಡುವನು ) ಪ್ರಭೊ ಕಣ್ಣುಬಿಡಿ. ( ಬಿಡುವನು ) ತಡಮಾಡಿದರೆ ವೈರಿಗಳು ಪಟ್ಟಣವನ್ನು ನಾಶಮಾಡುವರು.

**ಉತ್ತರ:—** ಮೂರ್ಖಾ ಅಮಂಗಳವನ್ನು ನುಡಿಯಬೇಡಾ. ಮಾಡಲಿ ಏನುಮಾಡುವರೆಂಬದನ್ನು. ತಿಳಿದು ತರ್ಕವಿತರ್ಕದಿಂದಲೇ ವೈರಿಗಳನ್ನು

ನಾಶಮಾಡಿಬಿಡುವೆನು (ತೋಳುಗಳನ್ನು ತೋರಿಸಿ) ದಂಭೋಳಿಗಳಂತಿರುವ ಈ ನನ್ನ ದೋಸ್ತಂಭಗಳ ವಿಜ್ರಂಭಣಾಭಂಗ ಪರಾಕ್ರಮಕ್ಕೆ ಆ ಹೇಡಿಗಳಾದ ಕೌರವರು ಎಷ್ಟು ಮಾತ್ರದವರು. ಆ ದುರ್ಯೋಧನನು ನನಗೆ ಶರಣಾಗತನಾದನು. ಭೀಷ್ಮನು ಕ್ಷಮೆಬೇಡಿದನು. ದ್ರೋಣನು ದೂರಾದನು. ನಡೆಯಿರಿ ನಿಶ್ಚಿಂತೆಯಿಂದ ನಿದ್ರಿಸೋಣ. ಗೋವುಗಳು ಆಗಲೇ ಮನೆಸೇರಿದವು ನಡೆಯಿರಿ ಪುನಃ ಕೋಪಕ್ಕಾಸ್ಪದವನ್ನು ಕೊಡಬೇಡಿ.

ಉತ್ತರೆ:— (ಸಿಟ್ಟಿನಿಂದ) ಅಣ್ಣಾ ಹೇಡಿಯಾದ ನೀನು ವಿರಾಟರಾಯನ ಹೊಟ್ಟೆಯಲ್ಲಿ ಹುಟ್ಟಬಾರದಾಗಿತ್ತು.

ಉತ್ತರ:— ಅದು ಅವರಿಗೆ ಮೊದಲುತಿಳಿಯಬೇಕಾಗಿತ್ತು.

ವಿರಾಮ:— ಅಲ್ಲೆಯಿರೋದು ಚಮತ್ಕಾರ.

ಉತ್ತರೆ:—ಅಣ್ಣಾ ತಾ ಇಲ್ಲಿ ಆ ಶಸ್ತ್ರಾಸ್ತ್ರಗಳನ್ನು. ಆಮೇಲೆ ನೋಡು ನಿನ್ನ ತಂಗಿಯ ಪರಾಕ್ರಮವನ್ನು.

ಉತ್ತರ:— ಅಬಲೆಯ ರಿಂದ ರಾಜ್ಯವು ಬರಬೇಕಾಗಿದ್ದರೆ ಸೈನ್ಯವೇಕೆ ಬೇಕಾಗುತ್ತಿತ್ತು. ಅಬಲೆಯರ ಶೌರ್ಯವೆಲ್ಲವೂ ಅಡಿಗೆಯಮನೆಯಲ್ಲಿ.

ಉತ್ತರೆ:—ಸಾಕು. ಅಷ್ಟಕ್ಕೆ ನಿಲ್ಲಿಸಿಬಿಡು ನಿನ್ನ ಹೇಡಿವಾಕ್ಯಗಳನ್ನು ಅಣ್ಣನೆಂಬ ಅಭಿಮಾನದಿಂದ ಸುಮ್ಮನಿರುವೆನು. ಬೇರೆಯವರಾಗಿದ್ದರೆ—ರುಂಡವು ಮುಂಡದಿಂದ ಬೇರೆಯಾಗಿ ಬಹಳ ಹೊತ್ತಾಗುತ್ತಿತ್ತು. ರಾಜ್ಯವು ಪರರ ಸ್ವಾಧೀನವಾಗುವ ಸಮಯಬಂದಾಗ ಯಾವ ಸ್ತ್ರೀಯಳು ಪತಿಯ ಮೋಹವೆಂಬ ಪರದೆಯನ್ನು ಹರಿದೊಗೆದು ಕಂಕಣವನ್ನು ಧರಿಸುವ ಕೈಗಳಲ್ಲಿ ಖಡ್ಗವನ್ನು ಹಿಡಿದು ವೈರಿಯ ಕಂಠನಾಳವನ್ನು ಸೀಳಿ ಹಸಿದ ಹುಲಿಯು ರಕ್ತವನ್ನು ಹೀರಿ ಎಲುವುಗಳನ್ನು ಮಾತ್ರ ಬಿಡುವಂತೆ ಅವರ ಹೆಣಗಳನು ಬಿಸಾಡಿ ರಣಕಾಳಿಗೆ ರಕ್ತದ ಅಭಿಷೇಕಮಾಡಿಸಿ ವೈರಿಯ ಸೇಡನ್ನು ತೀರಿಸಿ, ಜಯಭೇರಿಯನ್ನು ಹೊಡೆಯಿಸಿ ಆನಂದದಿಂದ ಅರಮನೆಯ ಮೇಲೆ ಧ್ವಜಪತಾಕೆಯನ್ನೇರಿಸುವಳೋ ಅವಳೇ ನಿಜವಾದ ಭಾರತೀಯಳು. ಶಾಂತಮೂರುತಿ ಯಾದ ಜಗದ್ವಂದ್ಯ ಮಹಾತ್ಮನ ಪ್ರೇಮಾಶೀರ್ವಾದಕೆ ಪಾತ್ರಳು. ಆದ್ದರಿಂದ ಧನುರ್ಬಾಣಗಳನ್ನು ನನ್ನ ಕೈಯಲ್ಲಿಕೊಟ್ಟ

ಇಲ್ಲಿಯೇ ಈ ವಿಶ್ರಾಂತಿ ಮಂದಿರದಲ್ಲಿ ವಿಸ್ರಮಿಸು. ಹೋಗು ಕೆಟ್ಟ ಮುಖ ವನ್ನಿಟ್ಟುಕೊಂಡು.

**ಅರ್ಜುನ :**— ( ಆನಂದಾತಿರೇಕದಿಂದ ) ಶಹಬಾಶ ತಾಯಿ. ನಿನ್ನಂತಹ ವೀರಪುತ್ರಿಯನ್ನು ಪಡೆದ ವಿರಾಟರಾಯರ ಪುಣ್ಯವೇ ಪುಣ್ಯ ಇದೋ ಪುಣ್ಯಾತ್ಮಳಾದ ನಿನಗೆ ಬೃಹನ್ನಳೆಯ ಪ್ರೇಮವಂದನೆಗಳು.

( ನಮಸ್ಕರಿಸುವನು )

**ಉತ್ತರ:**—( ಸಿಟ್ಟಿಗೆದ್ದಂತೆಮಾಡಿ ) ತಂಗೀ ಇನ್ನು ಮಾತ್ರ ತಡೆ ಯುವದಕ್ಕಾಗುವದಿಲ್ಲಾ. ಹೋಗು ತೆಗೆದುಕೊಂಡು ಬಾ ಧನುರ್ಭಾಣಗ ಳನ್ನು ತಡಮಾಡಬೇಡ. ಆಯಿತು ಇಂದಿಗೆ ಕೌರವರ ಪುಣ್ಯವು ಮುಗಿ ಯಿತು ಎಲೋ ವಿರಾಮಾ.

**ವಿರಾಮಃ**—ನಾನು ನಿಮ್ಮ ಸೇವಕ ಬುದ್ಧಿ.—ಸಿಟ್ಟಿನ ಭರದಲ್ಲಿ ಕೌರ ವರಕಿಡೆಯುವನೆಂದು ತಿಳಿದು—ನನ್ನನ್ನು ಸಂಹರಿಸಿ ಬಿಟ್ಟೀರಿ. ಮೊದಲೇ ತಮ್ಮ ಸಿಟ್ಟು ಬಹಳ ಕೆಟ್ಟದ್ದು ( ನಮಸ್ಕರಿಸುವನು. )

**ಉತ್ತರಃ**— ಎಲೋ ವಿರಾಮ. ಹೆದಂಬೇಡ ಗುಬ್ಬಿಯ ಮೇಲೆ ಬ್ರಹ್ಮಾಸ್ತ್ರವೇಕೆಂಬಂತೆ ನಿನ್ನನ್ನೇನು ಮಾಡಲಿ.— ನನ್ನ ಅಂತರಂಗವನ್ನು ತಿಳಿಯದೇ ಇದುವರೆಗೆ ನನ್ನ ತಂಗಿಯಾಡಿದ ಮಾತುಗಳನ್ನು ಕೇಳಿ ನನ್ನ ಹೃದಯದಲ್ಲಿ ಸಮುದ್ರ ತೆರೆಗಳಂತೆ ಉಕ್ಕೇರಿ ಬರುವ ಸಂತಾಪವನ್ನು ತಾಳಲಾರದೆ ಹಾಗೆ ನುಡಿದೆನು. ತಂಗೀ ಸಾಹಿತ್ಯಗಳನ್ನು ತೆಗೆದುಕೊಂಡುಬಾ.

**ಸುಧೇಷ್ಣ:** ಉತ್ತರೆ ಹೋಗು ಸಾಹಿತ್ಯಗಳನ್ನು ತೆಗೆದುಕೊಂಡುಬಾ.

( ಉತ್ತರೆಯು ಹೋಗಲನುವಾಗುವಳು )

**ಉತ್ತರ:**— ಹಾಂ ನಿಲ್ಲಿರಿ. ಅವ್ವಾ ಯುದ್ಧಮಾಡುವದು ಏತರಿಂದ.

**ಸುಧೇಷ್ಣಾ:**— ಕೈಗಳಿಂದ

**ಉತ್ತರ:**— ಮುಖ್ಯವಾಗಿ ಮನುಷ್ಯನಿಗೆ ಬೇಕಾದ ಅವಯುವಗಳಾವು.

**ಉತ್ತರೆ:**—ಸರ್ವೇಂದ್ರಿಯಾಣಾಂ ನಯನಂ ಪ್ರಧಾನಂ ಎಂದಿರುವದ ರಿಂದ ಮನುಷ್ಯನಿಗೆ ಕಣ್ಣುಗಳೇ ಮುಖ್ಯಅವಯುವಗಳು.

ಉತ್ತರ:— ಅಂತಹ ಕಣ್ಣುಗಳಿಲ್ಲದಿದ್ದರೆ

ಉತ್ತರೆ:— ಯಾವದೂ ನಡೆಯುವದಿಲ್ಲಾ

ಉತ್ತರ:— ಸರಿ. ಸತಿಗೆಭೂಷಣವಾವದ

ಉತ್ತರೆ:— ಪತಿ ಇದ್ದರೆಭೂಷಣ.

ಉತ್ತರ:— ಸತಿಗೆ ಧರ್ಮವಾವುದು.

ಉತ್ತರೆ:— ಪತಿಯ ಪಾದಸೇವೆ.

ಉತ್ತರ: — ಸ್ತ್ರೀಯರಿಗೆ ಭೂಷಣವು ಏತರಿಂ

ಉತ್ತರೆ:— ಮಾಂಗಲ್ಯದಿಂದ.

ಉತ್ತರ:— ಮಾಂಗಲ್ಯವಿಲ್ಲದಿದ್ದರೆ

ಉತ್ತರೆ:— ಸ್ತ್ರಿಯಳು ನಾಯಿಗಿಂತಲೂಕಡೆ.

ಉತ್ತರ:— ಹಾಗಾದರೆ ಯುದ್ಧಕ್ಕೆ ಹೊರಡುವ ಶೂರ ಪುರುಷನಿಗೆ ಬೇಕಾದವಸ್ತು ಯಾವದು.

ಉತ್ತರೆ:— ರಥ.

ಉತ್ತರ:— ರಥವನ್ನು ನಡೆಸುವದಕ್ಕೆ.

ಉತ್ತರೆ:— ಸಾರಥಿಬೇಕು

ಉತ್ತರ:— ಆಹಾ, ಸಾರಥಿ ಬೇಕೇಬೇಕು.

ವಿರಾಮ:— ಬಹಳ ತಲೆಓಡಿಸಿ ತೆಗೆದಾ ಹಂಚಿಕೀನಾ, ಭೂಪಾ.

ಉತ್ತರೆ:— ಇದೊಂದು ದೊಡ್ಡ ಗಂಡಾಂತರ.

ಸುಧೇಷ್ಣಾ:— ಮಗೂ ಸಾರಥಿ ಇಲ್ಲದೆ ನೀನೇ ಹೋಗುವದಕ್ಕಾಗುವದಿಲ್ಲವೇ

ಉತ್ತರ:— ಆಗುತ್ತಿದೆ. ಆದರೆ ಅಪಜಯವಾದರೆ ಮಾತ್ರ ನಾನು ಹೊಣೆಗಾರನಲ್ಲಾ.

ಉತ್ತರೆ:— ಅಮ್ಮಾ, ಬ್ರಹನ್ನಳೆಯನ್ನೇಕೆ ಕಳಿಸಬಾರದು.

**ಸುಧೇಷ್ಣಾ:**— ಬ್ರಹನ್ನಳೇ ಸಾರಥ್ಯವನ್ನು ವಹಿಸುವಿಯಾ

**ಉತ್ತರೆ:**— ಅವ್ವಾ, ಹಿಂದೆ ಪಾಂಡವರಲ್ಲಿ ಅಗ್ರಗಣ್ಯನಾದ ಅರ್ಜುನನಿಗೆ ಸಾರಥಿಯಾಗಿದ್ದಳಂತೆ.

**ಉತ್ತರ:**— ಯಾರು.

**ಉತ್ತರೆ:**— ಈ ಬೃಹನ್ನ

**ಉತ್ತರ:**— ಅಯ್ಯೋ ದೇವರೆ, ಈ ಬೃಹನ್ನಳೆ ಅರ್ಜುನನಿಗೆ ಸಾರಥಿ ಆಯಿತಲ್ಲಾ, ಬೆಕ್ಕನ್ನು ಕರೆದುಕೊಂಡು ಹುಲಿಯ ಬೇಟೆಗೆ ಹೋದಂತೆ. ಯೋಚಿಸಿದಂತೆ; ಹೂಂ ಆಗಲಿ ಬೃಹನ್ನಳೆ ಕುದುರೆಗಳಿಗೆ ರಥವನ್ನು ಸಿದ್ಧ ಮಾಡಲಿಕ್ಕೆ ಹೇಳು

**ವಿರಾಮು:**— ಬುದ್ಧಿ, ರಥಕ್ಕೆ ಕುದರೆಗಳು.

**ಉತ್ತರ:**— ಎರಡೂ ಒಂದೇ ಹೋಗು. ಸಾರಥಿಗೆ ಸಿದ್ಧವಾಗುವದಕ್ಕೆ ರಥಕ್ಕೆ ಹೇಳು.

**ವಿರಾಮು:** ರಥಕ್ಕೆ ಜೀವ ಇಲ್ಲಾ ಬುದ್ಧಿ.

**ಉತ್ತರ:**— ಅದೆಲ್ಲವೂ ನನಗೆ ಗೊತ್ತಿದೆ. ನಾನು ಬೇಕಂತಲೇ ಹಾಗೆ ಚಮತ್ಕಾರವಾಗಿ ಪ್ರಶ್ನೆ ಮಾಡುತ್ತೇನೆ. ಹೋಗು ರಥವನ್ನು ಸಿದ್ದಮಾಡುವ ದಕ್ಕೆ ಸಾರಥಿಗೆ ಹೇಳು.

**ಸೇವಕ:**— ಆಗಲಿ ಬುದ್ಧಿ (ಇಷ್ಟರಲ್ಲಿ ವಿರಾಮನು ಧನುರ್ಬಾಣಗಳನ್ನು ಕತ್ತಿ, ಕವಚ, ಮುಂತಾದ ಸರ್ವಸಾಮಗ್ರಿಗಳನ್ನು ದೊಡ್ಡದಾದ ಕಟೆಯಲ್ಲಿ ಹಾಕಿಕೊಂಡು ಬಂದು ಮುಂದೆ ಇಟ್ಟು ಉತ್ತರನಿಗೆ ತಯಾರಿಸಿ ಅರ್ಜುನನಿಗೂ ಕೊಡುವನು. ಅರ್ಜುನನು ತಿಳಿಯದವರ ಹಾಗೆ ಧರಿಸುವನು. ಉತ್ತರೆಯು ಸರಿಪಡಿಸುವಳು. ಉತ್ತರನು ಹೆಣದ ಹಾಗೆ ನಿಲ್ಲುವನು.)

**ಉತ್ತರೆ:**— ಹೂ ಅಣ್ಣಾ ಇನ್ನು ತಡವೇಕೆ ?

**ಉತ್ತರ:**— ಸರಿ ಸಖಿಯರೇ ನಿಮಗೆ ಏನೇನು ಯಾರಿಗೆ ಬೇಕು. ನೆನಪಿನಿಂದ ಹೇಳಿಬಿಡಿರಿ. ಆ ಮೇಲೆ ನನಗೆ ಅದು ಬೇಕಾಗಿತ್ತು ಇದು ಬೇಕಾಗಿತ್ತು ಎಂದರೆ ನಾನು ಕೇಳುವವನಲ್ಲಾ

**ಶಾಂತಿಕೆ:** - ಮಹಾರಾಜ ನನಗೆ ಆ ದುರ್ಯೋಧನನ ಕಿರೀಟ ಬೇಕು.

**ಉತ್ತರ:**—( ಅಲಕ್ಷ್ಯದಿಂದ ) ಅದೇನು ಮಹಾ

**ಸೋರವೆ:**—( ವಯ್ಯಾರದಿಂದ ಹತ್ತಿರ ಬಂದು ) ಯುವರಾಜರೆ ನನಗೆ ಆ ಕರ್ಣನ ಕರ್ನಕುಂಡಲಗಳು ಬೇಕು.

**ಅಂಬಿಕಾ:**— ಸಾರ್ವಭೌಮ ಸಮ್ರಾಟಾ. ನನಗೆ ಬಯಕೆ ಹತ್ತಿರು ವದರಿಂದ ಆ ದುಃಶ್ಯಾಸನನ ಕರುಳುಬೇಕು.

**ಉತ್ತರ:**— ನೀವು ಹೇಳಿದ ಸಾಮಾನಗಳೊಂದೂ ಮನಸ್ಸಿಗೆ ಬರ ಲಿಲ್ಲಾ ಆಗಲಿ ಸ್ತ್ರೀಯರ ಅಪೇಕ್ಷೆಯನ್ನು ಈಡೇರಿಸುವದೇ ನನ್ನ ಕರ್ತವ್ಯ. ನನ್ನ ಅಂತಃಕರಣವು ಸಹ ನಿಮ್ಮಂತೆಯೇ ತರುವದಕ್ಕಿಂತಮೊದಲು ಯಾವ ದಕ್ಕೂ ಯೋಚನೆ ಮಾಡಬೇಡಿ.

**ಉತ್ತರೆ:**— ಸಖಿಯರೇ ಬನ್ನಿ, ಸ್ವಜನ ಹಿತಕ್ಕಾಗಿ, ಪ್ರಜರಸುಖ ಕ್ಕಾಗಿ, ಸ್ವರಾಜ್ಯಸಂಪಾದನೆಗಾಗಿ, ಹೊಂಟ ಕಲಿಕೇಸರಿಗೆ ಜಯತಿಲಕ ವನ್ನಿಟ್ಟು ವಿಜಯದಾರುತಿಮಾಡಿ ಕಳಿಸುವ.

ಪ್ರತಾಳ, ಪದ. ರಾಗದೇಶ

ಎಲ್ಲರೂ:—ಬೆಳಗುವ ಬನ್ನಿರಿ ರವಿಗೇ | ಸರಸಿ ಜನಯನೋದ್ಭಗೆ | ಭವತಾರಕ ಭಯ ಹರಗೆ | ಗುರುಭೀಷ್ಮರ ಗೆಲೆಯುವಗೆ | ವೈರಿಯ ಶಿರಗಳ ತರಿದು | ಸಲೆಸಖಿ ಯರ ಒಡವೆಯ ಪಡೆದು | ಕಾಲಾಂತಕ ನಂದದಿ ಮೆರೆದು | ಜಯಮಾಲೆಯ ಕೊರಳಲಿ ಮುಡಿದು | ಜಯ ಘೋಷವ ಸಾರುವಕಲಿಗೆ |

( ಎಂದು ಪದವನ್ನು ಹೇಳುತ್ತಾ - ಆರುತಿಮಾಡಿದ ಬಳಿಕ )

**ವಿರಾಮು:**—ವೈರಿಗಳಗಂಡ, ರಣಪ್ರಚಂಡ, ಧನುರ್ದಂಡಧರ ಘನ ಘೋರ, ರಣಚೀತ್ಕಾರ, ವೀರಾದಿವೀರ, ರಣಬೀರು, -ವಿಶ್ರಾಂತಿ ವಿಲಾಸ ಮಂದಿರ ಸುಕುಮಾರ, ಉತ್ತರಕುಮಾರ ಸಾಮ್ರಾಟ ಬಹುಪರಾಕ( ಎನುತಾ ಎಲ್ಲರೂ ಹೋಗುವರು.)

(ರಸ್ತಾ ಪರದೆ ಬೀಳುವದು)

## ೨ನೇ ಪ್ರವೇಶ

ರಸ್ತಾಪರದೆಯ ಮುಂದೆ ಪ್ರವೇಶಿಸಿ

**ಪಾಂಚಾಲಿ:—** ಪಾಂಡವರೊಡೆಯನಾದ ಕೃಷ್ಣಾ. ನಿನ್ನ ಭಕ್ತರನ್ನು ಇನ್ನೆಷ್ಟು ಬಗೆಯಿಂದ ಪರೀಕ್ಷಿಸುವೆ ಇಷ್ಟು ಸಾಲದೆ ಜಗತ್ತಿನೊಳಗೆ ಮಾಡ ಬಾರದ ಕೆಲಸಗಳನ್ನು ಪಾಂಡವರಿಂದ ಮಾಡಿಸಿ ಸಾಲುದುದಕ್ಕೆ ಜಗದೇಕ ವೀರನಾದ ನಿನ್ನ ಪ್ರಿಯಃಸಖ ಪಾರ್ಥನನ್ನು ಹೇಡಿ, ತಿಳಿಗೇಡಿ ಕ್ಷತ್ರಿಯ ಕುಲದ ರಣಹೇಡಿಯಾದ ಏನೊಂದೂ ತಿಳಿಯದ ಶುದ್ಧ ಪಶುವಾದ ಹುಡು ಗನ ಸಾರಥಿ ಯಾಗಲು ಹಚ್ಚಿದೆಯಲ್ಲವೆ ದೇವಾ ಇದೆಲ್ಲವೂ ನಿನ್ನ ಮಾಯಾ ತಂತ್ರದ ಲೀಲೆಯು. ಆಗಲಿ ನಿನ್ನ ಕೃಪಾಬಲದಿಂದ ಪಾಂಡವರು ಧರ್ಮಕ್ಕೂ ಸತ್ಯಕ್ಕೂ ಕಟ್ಟುಬಿದ್ದು ವಚನ ಭ್ರಷ್ಟರಾಗದೆ ಅಜ್ಞಾತವಾಸದ ಕಡೆಯ ಪಾವಟಣಿಗೆಯಲ್ಲಿರುವರು. ಅದೊಂದನ್ನು ಕಡೆಗಾಣಿಸಿದರೆ ಪಾಂಡವರು ಸತ್ಯದಿಂದ ಪಾರಾಗುವರು. ದೇವಾ ನಿನ್ನ ಕೃಪಾ ಕಟಾಕ್ಷಕ್ಕೆ ಪಾತ್ರರಾಗುವ ದಕ್ಕಾಗಿ ಯಾರು ದೀರ್ಘ ತಪಸ್ಸನ್ನು ನಡೆಸಿರುವರೋ ಶ್ರೀ ಮಹಲಕ್ಷ್ಮಿಯು ತನಗೆ ನಿವಾಸಸ್ಥಾನವಾದ ಕಮಲವನದಲ್ಲಿಯೂ ಆಸೆಯನ್ನು ಬಿಟ್ಟು ನಿನ್ನ ಪಾದ ಕಮಲಗಳನ್ನು ಹಿಡಿದು ಪರಮಾನು ರಾಗದಿಂದ ಸೇವಿಸುತ್ತಿರು ವಳೋ ಅಂತಹ ಮಹಾಮಹಿಮನಾದ ನಿನ್ನನ್ನು ತಮ್ಮ ಸ್ನೇಹಿತನನ್ನಾಗಿ ಮಾಡಿಕೊಂಡಿರುವ ಪಾಂಡವರ ಭಾಗ್ಯವೇ ಭಾಗ್ಯವು.

ತಾಳ, ಧುಮಾಳಿ — ಪದ, — ರಾಗ, ಮಾಲಗುಂಜಿ

ಧರೆಯೊಳೀಧರ್ಮ ಪರಾಕ್ರಮಕೆ ಜಯ। ದುರುಳಧರ್ಮಕಪಜಯವಿದು
ಸಹಜ॥ ಪರಮ ದಯಾಕರ ಪ್ರಭುಪರಾತ್ಪರಾ। ಶರಣ ಜನಾಸ್ರಿತ। ಸದಾ
ಶುಭಕರ। ಸುರರಿಗೆಮೃತವಾ। ನುಣಿಸಿಪೊರೆದನೆ। ದುರುಳದೈತ್ಯರಿಗೆ ಮೋಹ
ವ್ಯಸಗಿದನೆ॥

( ಹೋಗುವಳು. )

( ರಸ್ತೇಪರದೆ ಎತ್ತುವರು, ಹಿಂದೆ ಭೀಮನು ವಿರಾಟರಾಯನ ಅಡಿಗೆಯಮನೆ ಯಲ್ಲಿ ಉಂಡೆಯನ್ನುಕಟ್ಟುತ್ತಾ ಕುಳಿತಿರುವನು. ಉತ್ತರೆಯು ಹೊರಾಂಗಣದಲ್ಲಿ ನಿಂತು

**ಉತ್ತರೆ—** ಏನು ಚಮತ್ಕಾರವಿದು. ಈ ದಿವಸ ಬೆಳಗಿನ ಸಮಯದಲ್ಲಿ ಬಿದ್ದ ಸ್ವಪ್ನವನ್ನು ವಿಚಾರಿಸಿ ನೋಡಿದರೆ ಶುಭವೆಂದೇ ಕಂಡುಬರುವದು. (ಮುಂದೆ ನೋಡಿ) ಅವರಾರು ಅಮ್ಮನು ಬರಲಿ.

**ಸುಧೇಷ್ಣೆ:—** ಮಗೂ ಉತ್ತರೆ ಏನೋ ಒಂದು ಘನವಾದ ವಿಚಾರ ದಲ್ಲಿದ್ದ ಹಾಗಿದೆ. ಅದೇನು ಸಮಾಚಾರ ಮಗು ?

**ಉತ್ತರೆ:—** ಅಮ್ಮಾ ಅಡಿಗೆಯಮನೆಯಲ್ಲಿ.

**ಸುಧೇಷ್ಣೆ:—** ಆಶ್ಚರ್ಯ ! ಆ ಉತ್ತರೆ ಅಡಿಗೆಯ ಮನೆಯಲ್ಲೇನು?

**ಉತ್ತರೆ:—** ( ವಿಚಾರಗ್ರಹಸ್ತಳಾದಂತೆ ನಟಿಸಿ ) ಅಮ್ಮಾ ಅಡಿಗೆಯ ಮನೆಯಿಂದ ಬಂದೆ ಏನು ?

**ಸುಧೇಷ್ಣೆ:—** ಹೌದು

**ಉತ್ತರೆ:—** ಅಲ್ಲಿ ಬಾಣಸಿಗನು.

**ಸುಧೇಷ್ಣೆ:—** ಇರುವನು.

**ಉತ್ತರೆ:—** ನೀನು ಸರಿಯಾಗಿ ನೋಡಿದೆಯಾ ?

**ಸುಧೇಷ್ಣೆ:—**( ಆತುರದಿಂದ ) ಉತ್ತರೆ ಅದೇನು ಹೇಳಮ್ಮಾ ಬೇಗ ?

**ಉತ್ತರೆ:—**ಅಮ್ಮಾ ನಿನ್ನೆ ಬೆಳಗಿನ ಜಾವದಲ್ಲಿ ಒಂದು ವಿಚಿತ್ರ ಸ್ವಪ್ನ ವನ್ನು ಕಂಡೆನು. ಆ ಸ್ವಪ್ನದಲ್ಲಿ ಅಡಿಗೆಯಬಾಣಸಿಗನೇ ಭೀಮನೆಂದೂ, ಬೃಹನ್ನಳೆಯೇ ಲೋಕೈಕ ವೀರನಾದ ಪಾರ್ಥನೆಂದೂ, ದಾಸಿಯಾಗಿರುವ ಸೈರಂಧ್ರಿಯೇ ಪಂಚಕನ್ಯೆಯರಲ್ಲಿ ಸೇರಿದ ಪರಮಪತಿವ್ರತೆಯಾದ ದ್ರೌಪದಿ ಯೆಂದೂ ,ಕಂಕಭಟ್ಟನೇ ಮಹಾತ್ಮನಾದ ಧರ್ಮರಾಯನೆಂದೂ, ದನಕಾಯು ವವರೇ, ನಕುಲ, ಸಹದೇವರೆಂದೂ, ನಾಳೆ ಸೂರ್ಯೋದಯದ ಎರಡೂವರೆ ಗಳಿಗೆಗೆ ಅಜ್ಞಾತವಾಸದ ಅವಧಿ ಮುಗಿದು ಪ್ರಕಟರಾಗುವರೆಂದೂ ಸ್ವಪ್ನದಲ್ಲಿ ಹೇಳಿದಂತಾಯಿತು ಅಲ್ಲದೆ ಈ ದಿವಸ ಬೆಳಗಿನಿಂದಾ ನನ್ನ ಎಡಗಣ್ಣಂತೂ ಬಿಡದೇ ಹಾರುತ್ತಿರುವದು.

**ಸುಧೇಷ್ಣೆ:—** ( ಆನಂದದಿಂದಲೂ ಗಾಬರಿಯಿಂದಲೂ ) **ಉತ್ತರೆ** ಈ ವಿಷಯವನ್ನು ಅವರಿಗೆ ತಿಳಿಸೋಣವೆ ?

**ಉತ್ತರೆ:**—( ತುಟಿಯನ್ನು ಕಚ್ಚಿ ) ಬೇಡ ನಾಳೆ ತನ್ನಿಂದತಾನೇ ತಿಳಿಯುವದು. ಈಗ ಬಾಣಸಿಗನನ್ನು ಪ್ರೋತ್ಸಾಹಿಸಿ ಯುದ್ಧಕ್ಕೆ ಕಳಿಸುವಾ ನಾಳಿನಮಾತು ನಾಳಿಗೆ. ಅಮ್ಮಾ ನಿಜವಾಗಿ ಅವರು ಪಾಂಡವರಾದರೆ ಅವರಲ್ಲಿ ಪುಣ್ಯ ಮೂರುತಿಯಾದ ಮಹಾತ್ಮನ ಪಾದವು ಈ ಅರಮನೆಯಲ್ಲಿ ಬಿದು. ದರಿಂದ ಪವಿತ್ರರಾದೆವೆಂದೇ ತಿಳಿಯಬೇಕು. ನಾಳಿನ ದಿನವೇ ಶುಭದಿನ್ವ ಸ್ವರಾಜ್ಯವನ್ನು ತಿರುಗಿಪಡೆದ ಅತ್ಯಂತ ಶುಭದಿನ, ಭಾರತೀಯರಾದ ನಮ್ಮ ಎಳಿಗೆಯ ಪುಣ್ಯದಿನ.

ತಾಳ, ದಾದರಾ ಪದ. ರಾಗ ಕಾನಡಾ ಕರ್ನಾಟಕೀ

ನಾಳಿನ ಸುದಿನಾ ದಿನವು । ಸತ್ಯ ಮಹಾತ್ಮನದಯದಿ ಸತ್ಯಸುಖಾಜಗವಿದಂ । ಸ್ತುತ್ಯಕರಾನಂದಮಯಂ ॥ ಸತ್ಯಾವಾಕ್ಯದಿಗಳಿಗೆ । ಕೊಡುವಾತ ಸುಖವ ಮುದದಿಂ ।ದಾಸರ ಸುಖರಂಜಿತಂ । ಶಾಂತಿದಯಾನಂದಕರಂ ।

( ಪದವನ್ನು ಅನ್ನುತ್ತಾ ಉತ್ತರೆಯು ಹೋಗುವಳು. ರಸ್ತಾಪರದೆಯನ್ನು ಎತ್ತಿ ಹಿಂದೆ ವಿರಾಟನ ಅರಮನೆಯ ದೃಶ್ಯ. ಅಡಿಗೆಯ ಮನೆಯಲ್ಲಿ ಬಾಣಸಿಗನು ಹಿಟ್ಟುನಾದುತ್ತಾ )

**ಭೀಮ:**—ಪರದಾಸ್ಯವೆಂಬ ಶೃಂಖಲೆಯಲ್ಲಿ ಪಾಂಡವರು ಕೆಲದಿನ ಗೋಳಾಡಬೇಕೆಂದು ವಿಧಿ ಸಂಕಲ್ಪವಿರುವಾಗ ಭೀಮನಿದ್ದರೇನು, ಮೂರು ಲೋಕದಗಂಡ ಅರ್ಜುನನಿದ್ದರೇನ, ಕೇವಲ ವ್ರತ ನೇಮಗಳಿಂದಲೇ ಅಹಿಂಸೆಯೆಂಬ ತತ್ವದಿಂದ ರಾಜ್ಯವನ್ನು ಮರುಳಿ ಸಂಪಾದಿಸುವ ಶಕ್ತಿಯುಳ್ಳ ಮಹಾತ್ಮಾ ಧರ್ಮರಾಯನಿದ್ದರೇನು. ಮಹಾಪತಿವ್ರತೆಯಾದ ಪಾಂಚಾಲಿಯಿದ್ದರೇನು. ಇವರೆಲ್ಲರನ್ನೂ ಕಾಪಾಡುತ್ತಿರುವ ತನ್ನ ಲೀಲೆಗಳಿಂದಲೆ ಸೃಷ್ಟಿಸ್ಥಿತಿಲಯಂಗಳನ್ನು ನಡೆಸುವ ಅಪಾರ ಮಹಿಮನಾದ ಕೃಷ್ಣನಿದ್ದರೇನು ಅವರವರು ಮಾಡಿರುವ ಕರ್ಮ ಫಲವು ಮುಗಿಯುವವರೆಗೆ ಯಾರಿದ್ದರೂ ಅಷ್ಟೆ. ಇಲ್ಲವಾದರೆ ಜಗಜಟ್ಟಿಯೆಂಬ ಹೆಸರು ಪಡೆದಿರುವ ಭೀಮನು. ಅಡಿಗೆಯ ಭಟ್ಟನಾಗಿ ರೊಟ್ಟಿಯನ್ನು ಸುಡುವದಕ್ಕೆ ಕೂಡುತ್ತಿದ್ದನೆ ? ಹಣೆಯ ಬರಹವನ್ನುಅಳಿಸುವದು ಹರಿಹರರಿಂದಲೂ ಅಸಾಧ್ಯವೆಂಬುದು ಕಣ್ಣುಮುಂದೆ ಕಟ್ಟಿದೆ. ( ಯೋಚಿಸಿದಂತೆ ) ಏನು ಮಾಡಲಿ ಈಗ ಮೂರು ನಾಲ್ಕು ದಿನಗಳಿಂದ ಅರಮನೆಯಲ್ಲಿ ಕೇಳಿಬರುತ್ತಿರುವ ಯುದ್ಧದ ವಾರ್ತೆಯನ್ನು ಕೇಳಿ

ರೊಟ್ಟಿಯನ್ನು ಸುಡುವ ಕೈಗಳಲ್ಲಿ ವೈರಿಗಳೇ ಸಿಕ್ಕಂತಾಗಿ ಹಿಟ್ಟನ್ನು ಬಲವಾಗಿ ನಾದುತ್ತೇನೆ. ಉಂಡೆಯನ್ನು ಕಟ್ಟುವಾಗ ವೈರಿಗಳ ರುಂಡವೇ ಸಿಕ್ಕಂತಾಗಿ ಸಿಟ್ಟಿನಿಂದ ಮಂಡೆಹಚ್ಚಿ ಉಂಡಿಯನ್ನು ಹಿಚುಕುವಾಗ ಬೆರಳಿನ ಸಂದುಗಳಲ್ಲಿ ಬರುವ ಹುಪ್ಪವನ್ನು ಕಂಡು ವೈರಿಗಳ ನೆತ್ತರನೇ ಬಂದಿಶೆಂದು ಭವೆನ್ರಿಗೊಳ್ಳುತ್ತಿರುವೆನು. ಮಜ್ಜಿಗೆಯನ್ನು ಮಾಡುವದಕ್ಕೆ ಕೈಯಲ್ಲಿ ಕಡಗೋಲು ತೆಗೆದು ಕೊಂಡೆನೆಂದರೆ ಗದೆಯೇ ಬಂದಂತಾಗಿ ಕಡಗೋಲು ಹಿಡಿದು ಕೊಂಡು ಅಡಿಗೆಯ ಮನೆಯಲ್ಲಿ ಕುಣಿಯತೊಡಗುವೆ. ಏನಾದರೇನ ಎಲ್ಲವೂ ಕನಸು (ಮುಂದೆ ನೋಡಿ) ಓಹೋ ರಾಜಕುಮಾರಿಯು ಯಾವದೋ ವಿಚಾರಕ್ಕಾಗಿ ಬಂದಂತೆ ಕಾಣುತ್ತಿದೆ ಅಡಿಗೆಯಲ್ಲಿ ಏನಾದರೂ ಹೆಚ್ಚು ಕಡಿಮೆಯಾಗಿರಬೇಕು. ( ಇಷ್ಟರಲ್ಲಿ ಉತ್ತರೆಯು ಬಂದು )

ಉತ್ತರೆ: ಎಲಲಾ.

ಭೀಮ:—( ವಿನಯದಿಂದ ) ಅನ್ನದಾತೆ, ಈ ಸೇವಕನಿಂದ ಏನಾದರೂ ಅಪರಾಧವಾಗಿಲ್ಲವಷ್ಟೆ.

ಉತ್ತರೆ:—ಅದೇನಿಲ್ಲ ಒಂದು ರಾಜಕಾರಣಕ್ಕಾಗಿ ಬಂದಿರುವೆ.

ಭೀಮ:—ತಾಯಿ ಅಡಿಗೆಯವನಾದ ನನ್ನಲ್ಲಿ ರಾಜಕಾರಣವೆ ?

ಉತ್ತರೆ:—ಹೌದು ನಿನ್ನಲ್ಲಿ. ಮಹಾ ಶಕ್ತಿವಂತನಾದ ನಿನ್ನಲ್ಲಿ.

ಭೀಮ:—(ನಸು ನಕ್ಕು) ಮಹಾಶಕ್ತಿವಂತ ನಾನು! ಸುಳ್ಳು. ಏನೋ ಅಡಿಗೆಯು ಕೆಟ್ಟದ್ದಕ್ಕಾಗಿ ಸೇವಕನೊಡನೆ ಚೇಷ್ಟೆ ಎಂಬಂತೆ ಕಾಣುತ್ತಿದೆ. ಒಂದುವೇಳೆ ನಿಜವಾಗಿದ್ದರೆ ರಾಜರಾದ ತಮ್ಮ ಅನ್ನದ ಪುಣ್ಯದಿಂದ ರಾಜಕಾರಣದ ಪ್ರಶ್ನೆಗೆ ಉತ್ತರಕೊಡುವ ಶಕ್ತಿ ಬಂದರೂ ಬರಬಾರದೇಕೆ ಹಾಗಿದ್ದರೆ ತಾಯಿ ಅಪ್ಪಣೆಯಾಗಲಿ ಅದೇನು ?

ಉತ್ತರೆ:—ಎಲಲಾ. ನೀಚರಾದ ಕೌರವರು ( ಇಷ್ಟನ್ನುವದರೊಳಗಾಗಿ ಸವಟಿಗೆ ಕೈಹಾಕುವನು. ಉತ್ತರೆಯು ಹೆದರಿ ಹಿಂದಕ್ಕೆ ಸರಿದು )ಅಪ್ಪಾ ಬಾಣಸಿಗ ಬಾಯಿಂದ ಮಾತು ಹೊರಡುವದೇ ತಡ, ಸವಟಿಗೇ ಕೈಹಾಕಿದ್ದೆಯಲ್ಲಾ ಒಮ್ಮೆಲೆ ಅಂದಮೇಲೆ. ಶಕ್ತಿವಂತನಲ್ಲವೆಂಬುದು ಏತರ ಮೇಲಿಂದ !

ಏನೋಗೌಡ ಬಂಗಾಲವಿದೆ. ಅದೇನೇಯಿರಲಿ, ಸದ್ಯಕ್ಕೆ ನರ್ತನವನ್ನು ಕಲಿಸಲಿಕ್ಕೆ ಬಂದ. ಬೃಹನ್ನಳೆಯು ಉತ್ತರದಿಕ್ಕಿನ ಗೋವುಗಳನ್ನು ಬಿಡಿಸಿ ತರುವದಕ್ಕಾಗಿ ಹೋಗಿದ್ದಾಳೆ.

ಭೀಮ:— ( ಬೇಕಂತಲೆ ಆಶ್ಚರ್ಯದಿಂದ ) ಏನು ತಾಯಿ ಹೆಂಗಸು, ಕೌರವರ ಸಂಗಡ ಯುದ್ಧಕ್ಕೆ ಆಶ್ಚರ್ಯ!

ಉತ್ತರೆ: — ಆಶ್ಚರ್ಯವೇತರದು ಹೆಂಗಸರಲ್ಲಿದ್ದ ಶಕ್ತಿ ಸಾಹಸಗಳು ಯಾರಲ್ಲೂ ಇಲ್ಲ. ತಮ್ಮ ಪತಿವ್ರತಾ ಧರ್ಮದ ಶಕ್ತಿಯಿಂದ ಪರಪುರುಷರನ್ನು ಪಾಪದೃಷ್ಟಿಯ ಕಾಮುಕರನ್ನು, ಪರಮೇಶ್ವರನು, ಲೋಕಕಂಟಕನಾದ ಕಾಮನನ್ನು ತನ್ನ ಉರಿಗಣ್ಣಿನಿಂದ ದಹಿಸಿದಂತೆ, ಸುಟ್ಟು ಭಸ್ಮ ಮಾಡುವ ಶಕ್ತಿಯು ನಮ್ಮಲ್ಲಿದೆ. ಮುಖ್ಯವಾಗಿ ಪಾಪವೆಲ್ಲಿದೆಯೋ ಅದನ್ನು ತತ್‌ಕ್ಷಣವೇ ಪರಿಹಾರವಾಡುವ ಶಕ್ತಿಯು ನಮ್ಮ ಪತಿವ್ರತಾ ಧರ್ಮದಲ್ಲಿದೆ. ಬಹಳವೇಕೆ ತ್ರಿಮೂರ್ತಿಗಳನ್ನು ಸಹ ಮಕ್ಕಳಾಟದ ಗೊಂಬೆಗಳನ್ನು ಮಾಡಿ ಮೂಲೆಗೆ ಕೂಡ್ರಿಸುವ ಶಕ್ತಿಯಿದೆ. ಅಂದಮೇಲೆ ಹೆಂಗಸರನ್ನು ಹಿಯ್ಯಾಳಿಸುವದು ಅನುಚಿತ. ಆದ್ದರಿಂದ ಸಮಯವನ್ನು ಕಳೆಯುತ್ತ ಕೂಡ್ರುವದಕ್ಕೆ ಅವಕಾಶವಿಲ್ಲ. ಈಗಿದ್ದ ಹಾಗೆಯೇ ಯುದ್ಧಕ್ಕೆ ಹೊರಡು ( ಅನ್ನುವಷ್ಟರಲ್ಲಿ ಸಡ್ಡು ಹೊಡೆದು ನಿಲ್ಲುವನು )

ಉತ್ತರೆ: — ( ಹೆದರಿಕೆಯಿಂದಲೂ ಆನಂದದಿಂದಲೂ ) ಎಲಲಾ ಹೊರಡುವೆಯಾ ಹೀಗೇ,

ಭೀಮ:— ನನಗೇನು ಬೇಕಾಗಿದೆ ತಾಯಿ. ಕತ್ತಿ, ಬಿಲ್ಲು, ಬಾಣ, ಆನೆ, ಒಂಟೆ, ನೌಬತ್ತು, ವಾದ್ಯ ಯಾವದೂ ಬೇಕಾಗಿಲ್ಲ ಆದರೆ ಈ ಎರಡು ಬಾಹುಗಳಿಗೆ ಮಾತ್ರ ಶಕ್ತಿಬರುವಂತೆ ಆಶೀರ್ವದಿಸಿರಿ. ( ಕೈಮುಗಿದು ನಿಲ್ಲುವನು. )

ಉತ್ತರೆ:— ( ಕಣ್ಣಲ್ಲಿ ನೀರು ತಂದು) ಎಲಲಾ ನಿನ್ನ ಸ್ವಾಮಿಭಕ್ತಿಯನ್ನು ಕಂಡು ಆನಂದಬಾಷ್ಪಗಳು ತನ್ನಿಂದ ತಾನೇ ಹೋಗುತ್ತಿರುವವು.

॥ ಕಂದ ॥ ರಾಗ, ಶಂಕರಾಭರಣ.

ಏಕನಿಷ್ಠೆಯ ಸ್ವಾಮಿಭಕ್ತಿಗೆ। ಏಕಾದಶ ರುದ್ರಸ್ವರೂಪವು ಬರಲಿ ನಿನಗೆ।
ಕುರಿಯ ಹಿಂಡಿನೊಳು। ಸಿಂಹಪೊಗುವಂತೆ। ಕೌರವರಸೇನೆಯೊಳು ಪೊಕ್ಕು ।
ವೈರಿಶಿರಗಳ ತರಿದು। ಹರುಷದಲಿ ಬರುವ ಶಕ್ತಿ ನೀಯಲಿ॥ ಶಿವನು ನಿನಗೆ।
( ಎಂದು ಆಶಿರ್ವಾದ ಮಾಡುವಳು. ರಸ್ತಾಪರದೆ ಬೀಳುವದು. ಭೀಮನು ಪ್ರವೇಶಿಸಿ )

**ಭೀಮ:—** (ಕೋಪದಿಂದ) ಎಲೋ ಪಾಪಿಗಳಾದ ಕೌರವಕುನ್ನಿಗಳೇ ಇನ್ನು ನಿಮಗೆ ಉಳಿಗಾಲವಿಲ್ಲ. ( ಉತ್ತರೆಯು ಹೋಗುವದನ್ನು ನೋಡಿ ) ಅದೋ ಸಮಯಕ್ಕೆ ಸರಿಯಾದ ಸಲಹೆಯನ್ನು ಕೊಟ್ಟು, ಭೀಮನಿಗೆ ಮಾರ್ಗ ದರ್ಶಕಳಾದ ನನ್ನ ಹೆತ್ತಮ್ಮ ಪೂಜ್ಯ ಕುಂತೀದೇವಿಯಂತೆ ಭೀಮನಿಗೆ ಆಶೀರ್ವಾದಮಾಡಿ ಹೋಗುತ್ತಿರುವಳು. ( ಒಂದು ಕಡೆಗೆ ನೋಡುತ್ತಾ ) ಪಾಂಡವರ ಪಂಚಪ್ರಾಣನಾದ ಓ ಕೃಷ್ಣಾ ! ಪರರಗುಲಾಮರಾಗಿ, ಪರಸೇವೆ ಯಲ್ಲಿಯೇ ಕಾಲಕಳೆಯುವ ಈ ಬಡ ಪಾಂಡವರಿಗೆ ಇನ್ನಾದರೂ ಅಜ್ಞಾತ ವಾಸದ ಅಂತ್ಯದಿನಗಳನ್ನು ಚಿಂತೆಯಿಲ್ಲದೆ ಕಡೆಗಾಣಿಸಿ, ಚಿರಸುಖ ಕೊಡುವ ಚಿನ್ಮಯ ಮೂರುತಿಯು ನೀನಲ್ಲವೆ? ( ಯೋಚಿಸಿ ) ಈಗ ಪಾಪಿಗಳಾದ ಕೌರವರನ್ನು ಪ್ರತಿನಿತ್ಯವೂ ಪುಣ್ಯಮೂರುತಿಯಾದ, ಮಹಾತ್ಮಾ ! ಧರ್ಮ ರಾಯನ ಪವಿತ್ರ ಪಾದಗಳನ್ನು ಮುಟ್ಟಿ, ಪವಿತ್ರವಾದ ಈ ಕೈಗಳಿಂದಲೇ ಪಾಪಿಗಳ ಪ್ರಾಣತೆಗೆಯಬೇಕಾಯಿತಲ್ಲಾ ( ಯೋಚಿಸಿ) (ಮುಂದೆನೋಡಿ)। ಆಗೋ ಅಲ್ಲಿ ದೊಡ್ಡದಾದ ಮರವಿದೆ. ಅದನ್ನೇ ಬುಡ ಸಹಿತ ಕಿತ್ತೊಯ್ವೆ ( ಮುಂದೆ ಬರುವಷ್ಟರಲ್ಲಿ ಧರ್ಮನು ಬಂದು ಅಡ್ಡಗಟ್ಟಿ ) ಹಾ ! ಭೀಮಾ ಪ್ರಖರಾಗ್ನಿಯಂತೆ ಪ್ರಜ್ವಲಗೊಳಿಸುವ ಈ ನಿನ್ನ ಪ್ರಳಯ ಕಾಲದ ಕೋಪ ವನ್ನು ಶಾಂತಗೊಳಿಸು ಇದಕ್ಕೆ ಕೊಂಚಕಾಲ ಅವಧಿಯಿದೆ. ಅಲ್ಲಿಯ ವರೆಗೆ ಸಮಾಧಾನ,

**ಭೀಮ:—** ಅಣ್ಣಾ ಸಮಾಧಾನವೆಂಬ ಶಬ್ದವನ್ನು ನುಂದುಕನಾದರೂ ಮರೆಯುವದಿಲ್ಲವೆ? ಸಾಕು ಇನ್ನು ಮಾತ್ರ ಸಮಾಧಾನ ವೆಂಬ ನಾಲ್ಕಕ್ಷರ ಗಳು ನಿನ್ನಲ್ಲಿಯೇ ಐಕ್ಯವಾಗಿರಲಿ ಇನ್ನು ಮಾತ್ರ ಭೀಮನು ದುಷ್ಟನೆಂಬ ಶಬ್ದವನ್ನು ಬೆನ್ನಿಗೆ ಕಟ್ಟಬೇಡ.

ಧರ್ಮ:— (ಕಳಕಳಿಯಿಂದ) ಧರ್ಮನ ಪಂಚಪ್ರಾಣನಾದ ಭೀಮ ನಿನ್ನಣ್ಣನ ಇದೊಂದು ಕೊನೆಯ ಅಪ್ಪಣೆಯನ್ನು ಕೊನೆಗಾಣಿಸು.

ಭೀಮ:— ಅಣ್ಣಾ ! ಕೊನೆಯಿಲ್ಲದ ಮಾತು, ಕೊನೆಗಾಣಿಸುವ ಬಗೆ ಹೇಗೆ? ಅಣ್ಣಾ ನೀನು ಸಿಟ್ಟಾದರೂ ಚಿಂತೆಯಿಲ್ಲ. ಭೀಮನಿಗೆ ಬಂಧು ಗಳೇ ಇಲ್ಲ.

ಧರ್ಮ:— ಭೀಮಾ ನಾನು ನಿನ್ನ ಅಣ್ಣನಲ್ಲವೆ? ಬಾಲ್ಯದಿಂದಲೂ ನಿನ್ನ ಅತ್ಯಂತ ಪ್ರೀತಿಯ ಅನುಜಾತನಲ್ಲವೆ? ಧರ್ಮಸರ್ವಸ್ವವೂ ನೀ ನಲ್ಲವೆ? ಭೀಮಾ ಸತ್ಯಕ್ಕೆ ಕಟ್ಟುಬಿದ್ದ ನಿಮ್ಮೆಲ್ಲರಿಗೂ ಕಷ್ಟಕೊಟ್ಟ ಪಾಪಿ ಯಲ್ಲವೆ? ರಾಜಪುತ್ರರಾದ ನಿಮ್ಮನ್ನು ಪರರ ಮನೆಯಲ್ಲಿ ಮಾಡಬಾರದ ಕೆಲ ಸಕ್ಕೆ ಹಚ್ಚಿದ ಕಠಿಣ ಹೃದಯದ ಕಡುದುರಾತ್ಮನು ನಾನಲ್ಲವೆ! ಎಲಲಾ ಹೇಯವಾದ ಅಜ್ಞಾತವಾಸವೇ ನಿನ್ನ ಮಹಿಮೆಯನ್ನು ಎಷ್ಟೆಂದು ಹೇಳಲಿ. ಇದೆಲ್ಲದಕ್ಕೂ ಕಾರಣನಾದ ಬಂಧು ದ್ರೋಹಿ ಧರ್ಮಾ ಧಿಕ್ಕಾರ ಧಿಕ್ಕಾರ ವಿರಲಿ ನಿನ್ನ ಜನ್ಮಕ್ಕೆ. ನಡೆ ನಿನ್ನ ಪಾಪದಕರ್ಮವನ್ನು ನೀನು ಅನು ಭವಿಸು. ( ಎಂದು ಹೋಗಲನುವಾದನು. ದ್ರೌಪದಿಯು ಬಂದು ಭೀಮನ ಪಾದವನ್ನು ಹಿಡಿದು )

ದ್ರೌಪದಿ:— ದೇವ ನನ್ನ ಮಾತನ್ನು ಕೇಳುವದಿಲ್ಲವೆ! ನಾನು ನಿಮ್ಮ ಪಾದಸೇವಕಳಲ್ಲವೆ! ಪ್ರೇಮದ ಪತ್ನಿಯಾದ ಪಾಂಚಾಲಿಯಲ್ಲವೆ!

ಭೀಮ:— ದ್ರೌಪದಿ ಅಲ್ಲವೆಂದು ನಾನು ಹೇಳಲಿಲ್ಲಾ.

ದ್ರೌಪದಿ — ಹಾಗಾದರೆ ಲೋಕದಲ್ಲಿ ಸತಿಯು ಮಾತನ್ನು ಪತಿ ಪತಿಯ ವಚನವನ್ನು ಸತಿಯೂ ನಡೆಸುವದು ಸಂಸಾರದ ಮುಖ್ಯ ಸಾರವಲ್ಲವೆ! ಹೀಗಿರುವಾಗ, ಯಾವದೋ ಒಂದು ಅನರ್ಥಪ್ರಸಂಗದಲ್ಲಿ ನಮ್ಮ ಸತ್ವವನ್ನು ಕಾಯ್ದುಕೊಳ್ಳುವದಕ್ಕಾಗಿ ಪರಿಪರಿಯಾಗಿ ಪ್ರಾರ್ಥಿಸಿದರೆ, ಪಂಥವನ್ನು ಮುರಿಯುವದಕ್ಕಾಗುವದಿಲ್ಲವೆಂದು, ಪಾಂಚಾಲಿಯನ್ನು ನಿರಾಕರಿಸಿ ಕಳಿಸು ವದು ಯೋಗ್ಯವೇ ಇದರಲ್ಲಿ ಪಾಂಡವರ ಏಳಿಗೆಯೇ ಹೊರ್ತು ಅನರ್ಥವು ಎಳ್ಳಷ್ಟೂ ಇಲ್ಲಾ.

**ಭೀಮ:—** ಇಲ್ಲಾ ಕುಂತಿಯ ಪುತ್ರನಾದ, ಈ ಭೀಮನು ಆಡಿದ ಮಾತಿಗೆ ತಪ್ಪಿ, ಪಾಂಡವರು ವಚನಭ್ರಷ್ಟರು, ಜೀವಗಳ್ಳರು, ಲಜ್ಜೆಯಿಲ್ಲದವರು, ಅಭಿಮಾನಶೂನ್ಯರು ಎಂಬ ಹೇಯವಾದ ಹೇಸಿಮಾತನ್ನು ಲೋಕದ ಜನಗಳಿಂದ ಆಡಿಸಿಕೊಳ್ಳಲು ಭೀಮನ ಇಚ್ಛೆ ಇಲ್ಲಾ. ಆದ್ದರಿಂಡ ಯಾರೂ ನನ್ನನ್ನು ತಡೆಯಬೇಡಿ. ಇನ್ನು ಇದಕ್ಕೂ ಮೀರಿ, ವಚನಭ್ರಷ್ಟರಾದರೂ ಚಿಂತೆಯಿಲ್ಲಾ ನನ್ನ ಮಾತನ್ನು ನಡೆಸಲೇಬೇಕೆಂಬ ಹಟವಿದ್ದರೆ ಮಾತ್ರ ತಪ್ಪಾಡಿದ ಈ ನಾಲಿಗೆಯನ್ನು ಕಿತ್ತುಬಿಡುವೆನು. (ಎಂದು ನಾಲಿಗೆಗೆ ಕೈಹಾಕುವನು ಧರ್ಮನೂ ದ್ರೌಪದಿಯೂ ತಡೆಯುವರು.) ದ್ರೌಪದೀ ಹಿಂದೆ ಕೌರವರು ಸಭೆಗೆ ಎಳೆತಂದು ಸ್ವಜನದ್ರೋಹಿಯಾದ ದುಶ್ಯಾಸನನಿಂದ ಸೀರೆ ಸೆಳೆಯುವದಕ್ಕೆ ಹಚ್ಚಿ ನನ್ನ ಕೇಶಕ್ಕೆ ಕೈ ಹಾಕಿದಾಗ ಮಾಡಿದ ಶಪಥವನ್ನು ಮರೆತೆಯೇನು. ಈಗ ನಾನೂ ನಿನ್ನಂತೆ ಸಮಾಧಾನವನ್ನು ಹೊಂದಿ, ಸುಮ್ಮನಿರುವದಾದರೆ ಬಹುದಿವಸಗಳಿಂದ ಜಡೆಗಟ್ಟಿದ ನಿನ್ನ ಕೇಶಗಳನ್ನು ಹೀಗೇ ಬಿಡಬೇಕೆಂದು ನಿನ್ನ ಇಚ್ಛೆ ಇದ್ದರೆ ಮಾತ್ರ ನನ್ನದೇನೂ ನಕಾರ ವಿಲ್ಲಾ. ನಿಮ್ಮ ಮನಸ್ಸಿಗೆ ಬಂದಂತೆ ಮಾಡಿರಿ.

**ಧರ್ಮ:—** ಭೀಮಾ ಏನಿದ್ದರೂ ಈ ಸಮಯದಲ್ಲಿ, ಕರ್ಮಚಂಡಾಲನಾದ ಧರ್ಮನ ಮಾತನ್ನು ನಡೆಸು ನಿರಾಕರಿಸಬೇಡ. ಇಗೋ ಭೀಮಾ ನಿನಗೆ ಕರಜೋಡಿಸುವೆನು. (ಎಂದು ನಮಸ್ಕರಿಸುವನು. ಭೀಮನು ಪಶ್ಚಾತ್ತಾಪದಿಂದ)

**ಭೀಮ:—** ಅಣ್ಣಾ ನೀನು ಯಾರು?

**ಧರ್ಮ:—** ನಿನ್ನ ಅಣ್ಣಾ.

**ಭೀಮ—** ನನ್ನ ಸನ್ಮಾರ್ಗದರ್ಶಕ ಗುರು ಯಾರು?

**ಧರ್ಮ:—** ನಾನು.

**ಭೀಮ:—** ತಂದೆಯಾದ ಪಾಂಡುರಾಜನು ಸತ್ತನಂತರ, ಮಕ್ಕಳನ್ನು ಜೋಪಾನಮಾಡಿದಂತೆ, ಮಾಡಿದ ಪುರುಷನು ಯಾರು? ಮಹಾತ್ಮನಾದ ನೀನಲ್ಲವೇ. ಹಸಿದು ಮನೆಗೆ ಬಂದಕೂಡಲೇ ಬಾಲಕರಂತೆ ನನ್ನ ಗಲ್ಲ ತುಟಿಗಳನ್ನು ಹಿಡಿದು, ತಲೆಯಮೇಲೆ ಸಾವರಿಸಿ ಭೀಮಾ ಹಸಿದಿರುವೆಯಾ ಏಳು.

ಮೊದಲು ಭೋಜನಮಾಡೆಂದು ಬಹು ಕಳಕಳಿಯಿಂದ ಕಳುಹಿಸಿದ ಕರುಣಾ ಮೂರುತಿಯು ನೀನಲ್ಲವೆ. ಅಂದಮೇಲೆ ನಿನ್ನ ಮೇಲೆ ಹಟ ನಡಿಸದೆ ಮತ್ತಾರಮೇಲೆ ನಡಿಸಲಿ. ತಂದೆಯಾದ ನೀನು, ನನಗೆ ನಮಸ್ಕರಿಸಿ ಭೀಮನನ್ನು ನರಕಕ್ಕೆ ಕಳಿಸಬೇಕೆಂದಿರುವೆ ಏನು ಅಣ್ಣಾ ನಿನಗೆ ಪ್ರತಿಭಟಿಸಿ ನುಡಿದ ಈ ಅರಿಷ್ಟ ನಾಲಿಗೆಯನ್ನು ಕತ್ತರಿಸಿಬಿಡು (ಎಂದು ನಾಲಿಗೆಯನ್ನು ಮುಂದೆ ಮಾಡುವನು )

**ಧರ್ಮ:—** ಭೀಮ ದುಃಖವನ್ನು ಬಿಟ್ಟೆ. ನಮ್ಮ ಅವಧಿಯು ಇದೊಂದೇದಿವಸ ಉಳಿದಿರುವದು. ಅಲ್ಲಿಯ ವರೆಗೆ ಈ ಭೀಕರ ಕೃತಿಗಳ್ನು ಬಿಟ್ಟುಬಿಡು. ಗಿಡಕ್ಕೆ ಗಿಡವನ್ನೇ ಕೀಳುವದು' ಪರ್ವತಗಳನ್ನು ಎತ್ತುವದು. ಇಂಥ ಅಮಾನುಷ ಕೃತಿಗಳನ್ನು ಆಚರಿಸಿದರೆ, ನಮ್ಮ ನಾಶದ ಹಾದಿಯನ್ನೆ ನಿರೀಕ್ಷಿಸುತ್ತಿರುವ ಕೌರವರು ಗುರ್ತಿಸಿ ಪುನಃ ವನವಾಸ ಅಜ್ಞಾತವಾಸವನು ಅನುಭವಿಸುವದಕ್ಕೆ ಹಚ್ಚದೆ ಬಿಡುವರೆ,

**ದ್ರೌಪದಿ....** ನಾಥಾ ನಮ್ಮಗಳ ಆಧಾರನಾದ ಕೃಷ್ಣಸ್ವಾಮಿಯ ಹಿತದ ನುಡಿಗಳನ್ನು ಇಷ್ಟು ಬೇಗ ಮರತೆಯಾ ಯಾವ ಮಹಾತ್ಮನು ಆಗಾಗ ಮಂದಹಾಸ ವಿಶಿಷ್ಟಗಳಾದ ಪರಿಹಾಸ ವಾಕ್ಯಗಳನ್ನಾಡುತ್ತ ಓ ಪಾರ್ಥಾ! ಓ ಅರ್ಜುನ! ಓ ಪ್ರೀಯ ಸಖ! ಓ ಕುರುನಂದನ! ಓ ವಾಯುನಂದನ ಎಂದು ನಿಮ್ಮನ್ನು ಬಾಯಿತುಂಬಾ ಕರೆಯುತ್ತಿದ್ದ ಆತನ ಮಧುರಾಕ್ಷರಗಳನ್ನು ಮರೆತಿಯಾ. ನಾವು ಕೆಲವೊಂದು ಸಮಯದಲ್ಲಿ ಅಜ್ಞಾತೆ ಯಿಂದ ಎಷ್ಟೋ ತಪ್ಪುಗಳನ್ನು ನಡೆಸಿ, ಆತನನ್ನು ತಿರಸ್ಕರಿಸಿದ್ದರೂ, ಸುರ ನಾಯಕನಾದ ಆ ಪುರುಷೋತ್ತಮನು ಮಿತ್ರನ ತಪ್ಪನ್ನು ಮಿತ್ರನೂ, ಮಕ್ಕಳ ತಪ್ಪನ್ನೂ ತಂದೆಯೂ, ಮನ್ನಿಸುವಂತೆ ನಮ್ಮ ತಪ್ಪುಗಳೆಲ್ಲವನ್ನು ಮನ್ನಿಸಿ, ಕಾಪಾಡುತ್ತಬಂದ, ಕರುಣಾಘನನ ನುಡಿಯನ್ನು ನಡೆಸುವದಿಲ್ಲವೆ

**ಭೀಮ:—** ( ಕನಿಕರದಿಂದ , ಪಾಂಚಾಲಿ ಎಂತಹ ಮಾತಾಡಿದೆ· ಭೀಮನು ಹೆತ್ತತಂದೆಯನ್ನು ಮರೆಯುವಷ್ಟು ಉನ್ಮತ್ತನೆ. ದೇವಿ ಯಾವ ಭಗವಂತನು, ಯಜ್ಞಾರಾಧ್ಯರಾದ ಇಂದ್ರಾದಿದೇವತೆಗಳ ಶರೀರದಲ್ಲಿ ತಾನೇ ಪ್ರವೇಶಿಸಿದ್ದು ಅವರವರ ಯಜ್ಞಕಾರ್ಯಗಳಿಂದ ಪ್ರಸನ್ನನಾಗಿ ಕೋರಿಕೆ

ಗಳನ್ನು ಕೈಗೂಡಿಸುತ್ತಿರುವನೋ, ಅವರೆಲ್ಲರಿಗೂ ಕ್ಷೇಮವನ್ನುಂಟುಮಾಡುತ್ತಿರುವನೋ, ಮುಖ್ಯವಾಗಿ ಆ ಭಗವಂತನು ಸ್ಥಾವರ ಜಂಗಮಾತ್ಮಕಗಳಾದ ಸಮಸ್ತ ಪ್ರಪಂಚದ ಒಳಗೂ ಹೊರಗೂ ತಾನೊಬ್ಬನೇ ವಾಯುವಿನಂತೆ ವ್ಯಾಪಿಸಿ, ಅವುಗಳಿಗೆ ತಾನೇ ಆಧಾರನಾಗಿರುವನೋ ಯಾವ ಪುರುಷೋತ್ತಮನು ಪಾಂಡವರನ್ನು ತನ್ನ ಪ್ರಾಣಕ್ಕಿಂತಲೂ ಮಿಗಿಲೆಂದು ಕಾಪಾಡುತ್ತ ಬಂದಿರುವನೋ ಅಂತಹ ಪರಮ ದಯಾಮೂರ್ತಿಯನ್ನು ಮರೆಯುವಷ್ಟು ಅವಿವೇಕಿ ಎಂದು ತಿಳಿದೆಯಾ! ದೇವೀ ಕೋಪಾತಿರೇಕದಿಂದ ಹಿಂದುಮುಂದಿನ ವಿಚಾರವನ್ನರಿಯದೆ ಮಾತಾಡಿದ ಅಜ್ಞಾನಿ ಭೀಮನ ತಪ್ಪುಗಳನ್ನು ಮನ್ನಿಸು.

**ದ್ರೌಪದಿ:**— ಭೀಮದೇವ, ಪಾಂಚಾಲಿಯು ಮಾತನ್ನು ಪಾಲಿಸಿದ್ದಕ್ಕಾಗಿ ಪಾದದಲ್ಲಿ ಪ್ರಣಾಮಗಳನ್ನು ಮಾಡುವೆ (ಮಾಡುವಳು)

**ಭೀಮ:**— ದೇವಿ, ಭೀಮನ ಪ್ರೀತಿಯ ಪತ್ನಿಯಲ್ಲವೆ? ನನ್ನ ಸನ್ಮಾರ್ಗದರ್ಶಕಳಲ್ಲವೆ ಏಳು ನಿನ್ನ ಇಚ್ಛೆಯಂತೆ ನಡೆಯುವೆ. (ಎಂದು ಕಾಲು ಹಿಡಿದ ದೇವಿಯನ್ನು ಎಬ್ಬಿಸುವನು)

**ಧರ್ಮ:**— ಭೀಮಾ ಹೋಗೋಣವೆ ?

**ಭೀಮ:**— ನಡೆ ಮುಂದಿನ ಕರ್ತವ್ಯವನ್ನು ನೋಡೋಣ.

(ಹೋಗುವರು ದ್ರೌಪದಿಯು ಅವರು ಹೋದಕಡೆಗೆ ನೋಡುತ್ತ.

**ಪಾಂಚಾಲಿ:**— ಪಾಂಚಾಲಿಯ ಪಂಚಪ್ರಾಣನಾದ ಓ ಕೃಷ್ಣ ಯದುಕುಲೋತ್ತಮನಾಗಿಯೂ, ಭಕ್ತಪಾಲಕನಾಗಿಯೂ, ವಿಲಕ್ಷಣಮಹಿಮೆಯುಳ್ಳವನಾಗಿಯೂ, ಸಹಜವಾದ ನಿತ್ಯಾನಂದ ಪರಿಪೂರ್ಣನಾಗಿಯೂ ಲೀಲಾರ್ಥವಾಗಿ ಒಂದೊಂದು ಕಡೆಯಲ್ಲಿ ಪ್ರಾಕೃತ ದೇಹವನ್ನು ಹೊಂದಿ ಅವತರಿಸುವವನಾಗಿಯೂ ನಿನ್ನ ಸಂಕಲ್ಪದಿಂದಲೇ ಚೇತನರಿಗೆ ಸಂಸಾರ ಪ್ರವರ್ತಿಯನ್ನುಂಟುಮಾಡತಕ್ಕವನಾಗಿಯೂ ಲೀಲಾಮಾತ್ರದಿಂದಲೇ ಜಗಜ್ಜನ್ಮಸ್ಥಿತಿಯ ಪ್ರಳಯಂಗಳನ್ನು ಕಲ್ಪಿಸುವ ಓ ಪರಮ ಪುರುಷ ಆದಿನಾರಾಯಣ ಪಾಂಡವರನ್ನು ಇದುವರೆಗೂ ಕಾಪಾಡುತ್ತ ಬಂದಂತೆ ಮುಂದಾದರೂ ಕಂಟಕದಿಂದ ಕಾಪಾಡುವ ಭಾರವು ನಿನ್ನದಲ್ಲವೆ ನಿನ್ನ ಸಹೋದರಿಯ ಮಾನಮರ್ಯಾದೆಗಳು ನಿನ್ನವಲ್ಲವೆ.

ಕರ್ನಾಟಕಿ, ಪದ, ರೂಪ ತಾಳ, ರಾಗ ಆನಂದಭೈರವಿ

ಪ್ರಿಯಕರ ಪಾಂಡವಪಾಲ। ಹೈಯವದನನೆ ಪಾಪಭಂಜನ। ಅಭಯವ ನೀಯೋ ಸ್ವಾಮಿ। ನೀನೇಗತಿ ಕಾಯೋ ಪ್ರೇಮಿ ಕರುಣಿಸಿದೆ ಕರಿರಾಜನ। ಮೊರೆಯಕೇಳಿ ಸಾರಿಬಂದೆ ಪೊರೆದೆಯೊ ನೀ ಕರುಣಾಳುವೆ ಪಾಹಿ ಪಾಹಿ ನಂದಬಾಲ ‖

ಪದವನ್ನು ಅನ್ನುತ್ತಿದ್ದ ಹಾಗೆ ಅಂಕಪರದೆ ಬೀಳುವದು. )

## ೨ನೇ ಅಂಕ ಸಮಾಪ್ತ.

# ೩ನೇ ಅಂಕ

## ೧ನೇ ಪ್ರವೇಶ.

( ರಸ್ತಾಪರದೆಯ ಮುಂದೆ ಶಕುನಿಯು ಯೋಚಿಸುತ್ತ ಪ್ರವೇಶಿಸುವನು. )

**ಶಕುನಿ:—** ಇಲ್ಲಾ, ಇನ್ನುಮಾತ್ರ ಶಕುನಿಗೆ ಉಳಿಗಾಲವಿಲ್ಲಾ. ಇದುವರೆಗೆ ವಿಲಕ್ಷಣಬುದ್ಧಿಯನ್ನು ಉಪಯೋಗಿಸಿ, ಮಾಡಿದ ಸಾಹಸಗಳೆಲ್ಲವೂ ಬೂದಿಯಲ್ಲಿಮಾಡಿದ ಹೋಮದಂತಾದವು. ನನ್ನ ಆಜನ್ಮ ವೈರಿಗಳಾದ ಕೌರವರ ನೂರೊಂದು ವಿಷವೃಕ್ಷಗಳನ್ನೂ ಪಾಪಿಗಳಾದ ಪಾಂಡವರ ಮುಳ್ಳಿನ ಬೇರುಗಳನ್ನೂ ಸಮೂಲಸವರಿ ಹಾಕದವಿನಃ ಸಮಾಧಾನವಿಲ್ಲಾ ಏನುಮಾಡಲಿ, ಯಾವಬಗೆಯಿಂದ ಸೇಡುತೀರಿಸಿಕೊಳ್ಳಲಿ, ಏನೂ ತೋಚದಾಗಿದೆ.

( ಅನ್ನುವಷ್ಟರಲ್ಲಿ ಎದುರಿಗೆ ದುರ್ಯೋಧನನು ಬರುವನು. )

**ದುರ್ಯೋಧನ:—** ಮಾವಾ ಏನು ಬಹಳ ಆಲೋಚನೆ ?

**ಶಕುನಿ:—** ಆಲೋಚನೆ ಏತರದು. ಇದುವರೆಗೂ ಶ್ರೀಕೃಷ್ಣನ ಪೂರ್ಣಬಲವಿದ್ದ ಪಾಂಡವರನ್ನು ಪಾಪಕೂಪದಲ್ಲಿ ನೂಕಬೇಕೆಂಬ ಸಂಕಲ್ಪದಿಂದ ಕಪಟದ್ಯೂತವನ್ನಾರಂಭಿಸಿ ಪುಣ್ಯಾತ್ಮನಾದ ಧರ್ಮರಾಯನ ಮನಸ್ಸಿನಲ್ಲಿ ದ್ಯೂತವನ್ನಾಡಬೇಕೆಂಬ ಮಹಾತ್ವಾಕಾಂಕ್ಷೆಯನ್ನು ಹುಟ್ಟಿಸಿ ಕಪಟದಿಂದ ಸೋಲಿಸಿ, ಅವನಿಂದ ಮನಬಂದಂತೆ ಪಣವನ್ನುಮಾಡಿಸಿ ೧೨ ವರ್ಷ ವನವಾಸವನ್ನೂ ಒಂದು ವರುಷ ಅಜ್ಞಾತವಾಸವನ್ನೂ ಅನುಭವಿಸುವದಕ್ಕೆ ಹಚ್ಚಿಸಿ

ಕೌರವರ ಮನಸ್ಸಿನ ಮಾತ್ಸರ್ಯವೆಂಬ ಸಂತಾಪದ ಪಂಥವನ್ನು ಪೂರೈಸ ಬೇಕೆಂಬ ಸದುದ್ದೇಶದಿಂದ ಯಾವ ಮುತ್ಸದ್ದಿಯು ಮುಂದುವರಿದು ಘಾತಕ ಕಾರ್ಯಗಳನ್ನು ಮಾಡಿ ಮುಗಿಸಿದನೋ ಆ ಶಕುನಿಯ ಅಂತ್ಯಕಾಲವಿಂತು ಬಂದಿರುವದು

**ದುರ್ಯೋಧನ:**—(ಗಾಬರಿಯಿಂದ) ಮಾವಾ ಬೇಗ ಹೇಳು, ಹೇಗೆ ಬಂದಿರುವುದು.

**ಶಕುನಿ:**—( ವ್ಯಸನದಿಂದ )ದುರ್ಯೋಧನ ರಾಜಕಾರಣಕ್ಕೆ ಪಟುತ್ವ ಬೇಕು. ಬಟುಗನಂತೆ ವರ್ತಿಸಿದರೆ ಒದಗುವ ಪ್ರಸಂಗಗಳು ಹೀಗೆ

**ದುರ್ಯೋಧನ:**— ಮಾವಾ ಮುತ್ಸದ್ದಿಗಳಾದ ತಮ್ಮ ಮರ್ಮದ ಮಾತಿನ ಅರ್ಥವಾಗಲೊಲ್ಲದು

**ಶಕುನಿ:**— ಈಗ ಅರ್ಥವಾಗುವದಿಲ್ಲಾ. ನಾಳೆ ಕೌರವರ ದೇಹ ಗಳೊಂದಿಗೆ ಪಾಂಡವರು ಹೊತ್ತಿಸಿದ ಅಗ್ನಿಯಲ್ಲಿ ಶಕುನಿಯದೇಹವು ಬೆಂದು ಬೆಂಡಾಗುವಾಗ ಅರ್ಥವಾಗುವದು

**ದುರ್ಯೋಧನ:**—(ಚಕಿತನಾಗಿ) ಮಾವಾ ಹಾಗಾದರೆ ಪಾಂಡವರ ಅಜ್ಞಾತವಾಸದ ಅವಧಿಯು ಸಮೀಪಿಸುತ್ತಬಂತೆ.

**ಶಕುನಿ:**— ದುರ್ಯೋಧನ, ನಾಳೆ ಸೂರ್ಯೋದಯಕ್ಕೆ ಪಾಂಡವರು ಅಜ್ಞಾತವಾಸವನ್ನು ಮುಗಿಸಿ ಇದುವರೆಗೆ ನಾವು ಕೊಟ್ಟ ತಾಪಗಳಿಂದ ಸಂತಪ್ತ ರಾಗಿ ಕೃಷ್ಣನೊಡನೆ ಹಸ್ತಿನಾವತಿಗೆ ಬಂದೇ ಬರುವರು. ಆಗ ಗಂಡುಗಲಿ ಗಳಾದ ಭೀಮಾರ್ಜುನರು ಕಣ್ಣುಗಳಲ್ಲಿ ಕಿಡಿಗಳನ್ನು ದುರಿಸುತ್ತಾ ಕಾಲ್ಕೆದರಿ ಕಾಳಗಕ್ಕೆ ಬಂದೇ ಬರುವರು. ತಮ್ಮ ರಾಜ್ಯವನ್ನು ತೆಗೆದುಕೊಂಡೇ ತೀರುವರು.

**ದುರ್ಯೋಧನ:**— ಮಾವಾ ಮುಂದೆ ಮಾರ್ಗ.

**ಶಕುನಿ:**— ಮಾರ್ಗವೇಕರದು, ಈ ರಾತ್ರಿಯೇ ವಿಕರ್ಣನನ್ನು ವಿರಾಟನಗರಕ್ಕೆ ಕಳುಹಿಸಿ ಗುಪ್ತವಾಗಿ ಅಲ್ಲಿದ್ದು ಪಾಂಡವರ ನಿಜಸ್ಥಿತಿಯನ್ನು ಕಂಡುಹಿಡಿದು, ಪುನಃ ವನವಾಸ ಅಜ್ಞಾತವಾಸಕ್ಕೆ ಅಪ್ಪಣೆಯನ್ನು ಕೊಡಿಸಿದ ರಾಯಿತು. ಈ ಕಾರ್ಯವನ್ನು ಮೊದಲು ಮಾಡುವಾ ನಡೆಯಿರಿ.

( ಎಲ್ಲರೂ ಹೋಗುವರು. ಜಂಗಲಿ ರಸ್ತಾ ಪರದೆಯು ಬೀಳುವದು. ಅದೇ ಪರದೆಯ ಮುಂದೆ ವಿಕರ್ಣನು ವೇಷವನ್ನು ಬದಲಾಯಿಸಿಕೊಂಡು ಕುದುರೆಯಮೇಲೆ ಬರುವಾಗ ಇವೆಲ್ಲವನ್ನು ಅರಿತ ಕೃಷ್ಣನು ಮಧ್ಯಮಾರ್ಗದಲ್ಲಿ ಭೂತವನ್ನು ನಿರ್ಮಿಸಿ ವಿಕರ್ಣನನ್ನು ಹೆದರಿಸಿ, ಮುಖಕ್ಕೆ ಕಪ್ಪುಹಚ್ಚಿ ಕಳಿಸುವಂತೆ ಏರ್ಪಡಿಸುವನು. )

**ವಿಕರ್ಣ:—** ಸೂರ್ಯೋದಯದೊಳಗಾಗಿಯೇ ವಿರಾಟನಗರವನ್ನು ಸೇರಬೇಕೆಂದು ಕುದುರೆಯನ್ನು ಎಷ್ಟು ಬಗೆಯಾಗಿ ಓಡಿಸಿದರೂ ಪಟ್ಟಣವೇ ಬರಲೊಲ್ಲದು. ಕಗ್ಗತ್ತಲೆಯಲ್ಲಿ ಮಾರ್ಗವು ಸರಿಯಾಗಿ ಕಾಣಲೊಲ್ಲದು. ಎಡಗಣ್ಣು ಬಿಡದೇ ಹಾರುತ್ತಿರುವದು. ಅಪಶಕುನಕ್ಕೆ ಕಾರಣಗಳಾದ ಗೂಬೆ ಮೊದಲಾದವುಗಳು ಕಿವಿಯು ಗಡ್ಡಿಕ್ಕುವಂತೆ ಧ್ವನಿಗಯ್ಯುತ್ತಿರುವವು. ಇದೆಲ್ಲ ವನ್ನು ವಿಚಾರಿಸಿದರೆ ದುಶ್ಚಿನ್ಹವೇ ತೋರುತ್ತಿರುವದು. ಕುದುರೆಯನ್ನು ಹಿಂದಿರುಗಿಸಲೇ? ದುರ್ಯೋಧನನು ಸುಮ್ಮನಿರುವನೇ? ಇಲ್ಲಾ, ಮೊದಲೇ ಪಾಂಡವರ ಅಜ್ಞಾತವಾಸದ ಅವಧಿಯು ನಾಳಿಗೇ ಪೂರ್ತಿಯಾಗುವದೆಂಬ ಸುದ್ದಿಯನ್ನು ಕೇಳಿ ಸಂತಪ್ತನಾದ ಅವನು ನನ್ನನ್ನು ತಮ್ಮನೆಂದು ಕರುಣಿಸದೆ ಕಾಯ್ದ ಎಣ್ಣೆಯ ಕೊಪ್ಪರಿಗೆಯಲ್ಲಿ ಹಾಕಿಸುವದೇ ಖಂಡಿತ. ಏನಾದರೂ ಆಗಲಿ ಕುದುರೆಯನ್ನು ಆದಷ್ಟು ವೇಗದಿಂದ ಹೊಡೆಯುವೆನು. ( ಅನ್ನುವಷ್ಟ ರಲ್ಲಿ ಮಾಯಾಭೂತವು ಎದುರಿಗೆ ಮಾತನಾಡುತ್ತ ಬರುವದು. )

**ಭೂತ:—** ಉರಿಯುತಿದೆ ಉರಿ. ಕರೆಯುತಿದೆ ಕರೆ. ಕರೆಕರೆದು, ರಣಮರಣ ಸೂಚನೆಗೈವ, ಮೃತ್ಯುವಿನಂತೆ ಕೂಗುತಿದೆ ಕಹಳೆ. ಬಾರಿ ಸುತಿದೆ ಭೇರಿ, ಎಲೆ ಎದೆಯ ಹಾರದಿರು, ಹಾರಿದರೂ ಹೌಹಾರಿಬೀಳದಿರು. ಬಿದ್ದರೂ ತಗ್ಗದಿರು, ತಗ್ಗಿದರೂ ಮುಗ್ಗದಿರು. ಮುಗ್ಗಿದರು, ಬೊಗ್ಗದಿರು. ನಾಬರುವೆ, ನಾಬರುವೆ. ಇನ್ನೆಲ್ಲಿಯು ನಗರ ( ಎನ್ನುತ್ತ ಬರುವಷ್ಟರಲ್ಲಿ ಹೆದರಿ ಕುದುರೆಯ ಮೇಲಿಂದ ಇಳಿದು ನಡಗುತ್ತ ದಿಕ್ಕುಗಾಣದೇ ನಿಲ್ಲುವನು .)

**ಭೂತ:—** ಎಲೋ ಕಪಟಿ ಕೌರವರ ಕಡೆಯ ಗುಪ್ತಚಾರ, ಅಪ ರಾತ್ರಿಯಲ್ಲಿ ನಿರ್ಮಾನುಷವಾದ ಈ ಪ್ರದೇಶದಲ್ಲಿ ಹಿಂದು ಮುಂದಿನ ಯೋಚನೆ ಇಲ್ಲದೆ ಕುದುರೆಯನ್ನೇರಿ ಕಪಟದಿಂದ ಪಾಂಡವರ ಗುಪ್ತ ಸಂಗತಿ ಗಳನ್ನು ತಿಳಿದುಕೊಳ್ಳಲು ಹೊರಟಿರುವೆಯಲ್ಲವೆ? ನಿನ್ನನ್ನೆಲ್ಲಿ ಬಿಡುವೆ (ಎಂದು ವಿಕಾರರೂಪದಿಂದ ನಿಲ್ಲುವದು )

ವಿಕರ್ಣ:—(ನಡಗುತ್ತ) ಅ ಅ ಅ ಅಪ್ಪಾ ನಿ ನಿ ನಿ ನಿ ನಿ ಯಾರು?

ಭೂತ:—ನಾನು ವಿರಾಟ ನಗರದಲ್ಲಿ ಸಾರ್ವಭೌಮನಾದ ವಿರಾಟ ರಾಯನ ಬೀಗನು? ಮತ್ಸ್ಯದೇಶದ ಅಧಿಪತಿ.

ವಿಕರ್ಣ:—( ಮತ್ತಿಷ್ಟು ಹೆದರಿ) ದೇವಾ ನಿಮ್ಮ ಹೆಸರು ಹೆ ಹೆ ಹೆ ಹೇಳಬಿಡಿರಿ.

ಭೂತ:—ನನ್ನ ಹೆಸರನ್ನು ಕೇಳುವೆಯಾ, ಸದ್ಯಕ್ಕೆ ವಿರಾಟರಾಯನ ಅಂತಃಪುರದಲ್ಲಿ ಮೊನ್ನೆ ಮೊನ್ನೆ ಅಂದರೆ ನಾಳಿಗೆ ಒಂದು ವರುಷದ ಹಿಂದೆ ಯಾರೋ ಐವರು ಗಂಧರ್ವರೂ ಸೈರಂಧ್ರಿ ಎಂಬ ( ಅಹ ಹ ಹ ಅಯ್ಯೋ ಎಂದು ಅಪ್ಪಿಕೊಳ್ಳಲು ಹೋಗುವದು. )

ವಿಕರ್ಣ:— ( ಹೆದರಿ ) ಅಯ್ಯೋ ದೇವಾ ನಾನು ಸೈರಂಧ್ರಿಯಲ್ಲಾ ವಿಕರ್ಣ ದಯವಿಟ್ಟು ಮುಂದೆ ತಿಳಿಸಿರಿ ಬೇಗ ಈಗ ನಮ್ಮ ಅವತಾರ ಹನ್ನೊಂದಕ್ಕಿದೆ. ಇನ್ನೊಂದಾದರೆ, ಇಲ್ಲೇಸಮಾಪ್ತಿ. ( ಎಂದು ಹೆದರಿ ಕೈಮುಗಿದು ನಿಂತುಕೊಂಡು. )

ಭೂತ:—ಇದು ಹದಿಮೂರನೇ ಅವತಾರ. ತ್ರಿಮೂರ್ತಿಗಳಲ್ಲಿ ಅಗ್ರ ಗಣ್ಯನಾದ ವಿಷ್ಣುವು. ಭಕ್ತರ ಉದ್ಧಾರಕ್ಕಾಗಿ ಹತ್ತು ಅವತಾರಗಳನ್ನೆತ್ತಿ ಭಕ್ತೋದ್ಧಾರಿ ಎಂಬ ಹೆಸರನ್ನು ಸ್ಥಿರಗೊಳಿಸಿ ಹೋಗುವಕಾಲಕ್ಕೆ ನನ್ನನ್ನು ತನ್ನ ಮಾಯದಿಂದಲೇ ಹತ್ತಿರಕ್ಕೆ ಬರಮಾಡಿಕೊಂಡು ಅಯ್ಯಾ ಪ್ರಪಂಚಕ್ಕೇ ಭಯಂಕರವಾದ ಭೂತವೇ ಈ ಯುಗದಲ್ಲಿ ಪಾಪಿಗಳಾದ ಕೌರವರು ಅಹಿಂಸೆಯ ವ್ರತನೇಮಿಯಾದ ಶಾಂತಮೂರುತಿ ಮಹಾತ್ಮ ಧರ್ಮರಾಜು ನನ್ನು ಕಪಟದಿಂದ ದ್ಯೂತವಾಡುವದಕ್ಕೆ ಕರೆದುಕೊಂಡು ಮನಬಂದಂತೆ ಪಣಮಾಡಿಸಿ ಸರ್ವರಾಜ್ಯವನ್ನು ಗೆದ್ದುದಲ್ಲದೆ ಪಾಂಡವರೈವರನ್ನೂ ಅವರ ಪತ್ನಿಯಾದ ಪಾಂಚಾಲಿಯನ್ನು ಸಹ ಗೆದ್ದು ಹನ್ನೆರಡು ವರುಷ ವನವಾಸ ವನ್ನೂ ಒಂದು ವರುಷ ಅಜ್ಞಾತವಾಸವನ್ನೂ ಅನುಭವಿಸುವದಕ್ಕೆ ಹಚ್ಚಿದರು ಈಗ ಅವರು ಮಾತಿನಂತೆ ಸತ್ಯಕ್ಕೆ ಚುತಿಯನ್ನು ತರಬಾರದೆಂದು ಒಂದು ವರುಷ ಅಜ್ಞಾತವಾಸವನ್ನು ವಿರಾಟರಾಯನ ಮನೆಯಲ್ಲಿ ಕೇವಲ ದಾಸ್ಯ ತ್ವದಲ್ಲಿ ತಿರುಕರಂತೆ ಕಳೆದು ನಾಳೆ ಸೂರ್ಯೋದಯದ ನಾಲ್ಕೂವರೆಗಳಿಗೆಯು

ಮೇಲೆ ಪಾಂಡವ ರೂಪದಿಂದ ಪ್ರಕಟರಾಗಿ ಅದೇ ವಿರಾಟನ ಸಿಂಹಾಸನದ ಮೇಲೆ ವಿರಾಜಮಾನರಾಗುವರು. ಇದನ್ನರಿತು ದುಷ್ಟ ಶಕುನಿಯು ದುರ್ಯೋಧನನೊಡನೆ ಆಪ್ತಾಲೋಚನೆಮಾಡಿ ಇದೇರಾತ್ರಿಯೇ ವಿರಾಟ ನಗರಕ್ಕೆ ಬಲಾಢ್ಯನಾದ ವಿಕರ್ಣನನ್ನು ಕಳುಹಿಸಿ ಅವರನ್ನು ಗುಪ್ತವಾಗಿ ಗುರ್ತಿಸಿ ಪುನಃ ವನವಾಸಕ್ಕೆ ಕಳಿಸಿದರಾಯಿತು. ಎಂಬ ದುರುದ್ದೇಶದಿಂದ ಕಳಿಸುವರೆಂಬ ವಾರ್ತೆಯನ್ನು ಕೇಳಿ ಮಾರ್ಗನಿರೀಕ್ಷಣೆ ಮಾಡುತ್ತಾ ಇರುವೆನು

**ವಿಕರ್ಣ:**— (ಹೆದರಿಕೆಯಿಂದ) ಅಪ್ಪಾ ಭೂತಪ್ಪಾ ನೀನು ವಿರಾಟ ರಾಯನ ಹೆಂಡತಿಯು ತಮ್ಮನಾದ ಕೀಚಕನೆಂದು ಹೇಳಿದೆಯಲ್ಲವೆ. ನಿನಗೆ ಈಜನ್ಮವು ಬರಲು ಕಾರಣವೇನು.

**ಭೂತಃ** — ಮಹಾತ್ಮರಾದ ಪಾಂಡವರೆಂಬುದನ್ನು ತಿಳಿಯದೆ ಕಾಮುಕ ನಾದ ನಾನು ನನ್ನ ಅಕ್ಕ ಸುಧೇಷ್ಣೆಯು ಪರಿಪರಿಯಾಗಿ ಹೇಳಿದರೂ ಲಕ್ಷಕ್ಕೆ ತಾರದೆ ಆ ಶಕ್ತಿ ಸ್ವರೂಪಿಣಿಯಾದ ಸೈರಂಧ್ರಿಯು ಮೇಲೆ ಬಲಾತ್ಕಾರ ಮಾಡಲು ನನ್ನ ಉಪಟಳವನ್ನು ತಾಳಲಾರದೆ ಮೋಸದಿಂದ ಗರಡಿಯಮನೆಗೆ ಬರುವಂತೆ ಹೇಳಿದಳು ಕಾಮೋದ್ರೇಕದಿಂದ ಮತ್ತನಾದ ನಾನು ಚಿತ್ತ ಗೊಟ್ಟು ನಿಜವೆಂದು ನಂಬಿಹೋದೆ ಪಾಂಡವರಲ್ಲಿ ಅಪಾರ ಬಲವುಳ್ಳ ಭೀಮ ನಿಂದ ಮರಣವಾಗ ಬೇಕೆಂಬ ವಿಧಿಲಿಖಿತಕ್ಕನುಸಾರವಾಗಿ ಭೀಮನು ಪ್ರಕಟ ನಾಗಿ ಗರಡಿಯಲ್ಲಿಯೇ ನನ್ನನ್ನು ಒಂದೆ ಮುಷ್ಟಿ ಪ್ರಹರದಿಂದ ಕೊಂದು ಹಾಕಿದನು.

**ವಿಕರ್ಣ:**—ಸರಿ. ಪಿಶಾಚಿ ಜನ್ಮವು ಬರುವದಕ್ಕೆ ಕಾರಣ ?

**ಭೂತ:**— ಮರಣ ಸಮಯದಲ್ಲಿ ನನ್ನ ಬಲವಾದ ಆಕಾಂಕ್ಷೆಯು ಪೂರ್ತಿಯಾಗದರಿಂದಲೂ ಶಕ್ತಿಸ್ವರೂಪಿಣಿಯ ಮೇಲೆ ಬಲಾತ್ಕರಿಸಿದ್ದ ರಿಂದಲೂ ಅಹಿಂಸೆಯ ತತ್ವದೊಡೆಯನಾದ ಶಾಂತಮೂರುತಿ ಧರ್ಮಾತ್ಮನಿಗೆ ಆತ್ಮವಂಚನೆಮಾಡಿದ್ದರಿಂದಲೂ ಕೆಲದಿನದವುಟ್ಟಿಗೆ ಈ ಪಿಶಾಚ್ಯ ರೂಪವು ಬಂದಿರುವದು.

**ವಿಕರ್ಣ:**—ಅಂದರೆ ! ಇದಕ್ಕೆ ವಿಮೋಚನೆ ಉಂಟೋ ?

**ಭೂತ:**—ಉಂಟು

**ವಿಕರ್ಣ:**—ಯಾವರೀತಿಯಲ್ಲಿ ?

**ಭೂತ:**– ( ಸ್ವಗತ ) ಹೇಗಾದರೂ ನಾಡಿ ಮಾತಿನಲ್ಲಿಯೇ ವೇಳೆ ವೆಚ್ಚಮಾಡಬೇಕು. (ಪ್ರ) ಎಲೋ ಕೇಳು ಶಾಂತಮೂರುತಿಯಾದ ಮಹಾತ್ಮನ ನಿಂದೆಮಾಡುವವರನ್ನೂ ಧರ್ಮಮೂರುತಿಯು ತನ್ನ ಸತ್ಯವೆಂಬ ತಪಸ್ಸಿನ ಬಲದಿಂದ ಮರಳಿರಾಜ್ಯವನ್ನು ಪಡೆದ ಶ್ರಾವಣ ಬಹುಳ ಚತುರ್ದಶಿ ಎಂಬ ನವಯುಗದ ಪುಣ್ಯದಿನದ ಆನಂದಕ್ಕಾಗಿ ತನ್ನ ಹಕ್ಕಿನರಾಜ್ಯದ ಪ್ರತಿಯೊಬ್ಬರ ಮನೆಯ ಮೇಲ್ಗಡೆಯಲ್ಲೇರಿಸಿದ ಮಹಾತ್ಮನ ಮುಖ್ಯಶಾಸ್ತ್ರವಾದ ಜಯಸೂಚಕದ ಪವಿತ್ರ ಪತಾಕೆಗಳನ್ನು ಯಾವನು ನಿಂದಿಸುವನೋ ಅಂತಹ ಮಾತೃದ್ರೋಹಿಗಳ ಮನೆಯಲ್ಲಿ ಗುಪ್ತವಾಗಿದ್ದು ಅವರ ರಕ್ತವನ್ನು ಹೀರುತ್ತಾ. ಮತ್ತೂ ಧರ್ಮಾತ್ಮನೊಡನೆ ಅನೇಕ ಬಗೆಯ ಕಷ್ಟನಷ್ಟಗಳನ್ನನುಭವಿಸಿ ರಾಜ್ಯಸಂಪಾದನೆಗೆ ಕಾರಣರಾದ ಭೀಮಾರ್ಜುನರನ್ನು ಯಾವ ಪಾಪಿಯು ಆಡಿಕೊಳ್ಳುವನೋ ಅವನ ಸರ್ವಸ್ವವನ್ನು ಮಾಯದಿಂದ ನಾಶಮಾಡಿ ಅವನ ಕೈಯಲ್ಲಿ ಮಣ್ಣಿನ ಪರಿಮಾಣಕೊಟ್ಟು ಮನೆ ಮನೆ ತಿರಿದುಣ್ಣುವದಕ್ಕೆ ಹಚ್ಚುತ್ತಾ ಕೊನೆಗೆ ಈ ಘೋರ ಕೃತಿಯನ್ನು ಕಂಡು ಪಶ್ಚಾತ್ತಾಪದಿಂದ ಪುಣ್ಯಾತ್ಮರನ್ನು ಜರೆಯಬಾರದೆಂಬ ಜ್ಞಾನವು ಜನತೆಯಲ್ಲಿ ಜನಿಸುವವರೆಗೆ ಇದೇರೀತಿಯಲ್ಲಿರು ಎಂದೂ, ಮುಂದೆ ಕೆಲದಿನಗಳನಂತರ ಪಾಂಡವರ ಅಜ್ಞಾತವಾಸದ ಕೊನೆಯ ದಿನದ ಕಂಟಕವನ್ನು ಕಡೆಗಾಣಿಸಿದ ಪುಣ್ಯದಿಂದಲೂ ಜಗದ್ವಂದ್ಯನಾದ ಧರ್ಮಾತ್ಮನ ವ್ರತನೇಮ ಶಕ್ತಿಯಿಂದಲೂ ಪಿಶಾಚ್ಯಜನ್ಮವು ನೀಗಿ, ಪುನರ್ಜನ್ಮದಲ್ಲಿ ರಾಜನಾಗ ಪೆಯೆಂದು ಕೃಷ್ಣಪರಮಾತ್ಮನ ಆಜ್ಞೆಯಾಗಿರುವದು. ಇರ್ಲಿ ನಿನಗೆ ತಂದೆತಾಯಿಗಳಿರುವರೋ ?

**ವಿಕರ್ಣ:**— ಇರುವರು ದೇವಾ.

**ಭೂತ:**— ನಾನು ದೇವನಲ್ಲಾ, ದೆವ್ವಾ.

**ವಿಕರ್ಣ:**— ಆದೇಹೊಕ್ಕಿರುವದು ನನ್ನ ಎದೆಯಲ್ಲಿ ಬಿಷ್ಟು.

**ಭೂತ:**— ಸರಿ, ತಂದೆತಾಯಿಗಳನ್ನು ಸ್ಮರಿಸು.

**ವಿಕರ್ಣ:**— ಆದೇಕೆ ಸ್ವಾಮಿ.

ಭೂತ:— ಸಾಯುವದಕ್ಕೆ ಗ:ಯವೆ.

ವಿಕರ್ಣ:— ಅದಕ್ಕೆ ನನ್ನ ಇಚ್ಛೆಇಲ್ಲಾ.

ಭೂತ:— ಬಿಡುವದಕ್ಕೆ ನನ್ನ ಇಷ್ಟವಿಲ್ಲಾ.

ವಿಕರ್ಣ:— ಹಾಗಾದರೆ ಮುಂದೆನನ್ನಗತಿ.

ಭೂತ:— ಪಾಪಿಯಾದ ನಿನಗೆ ಅಧೋಗತಿ.

ವಿಕರ್ಣ:— ನಾನು ಪಾಪಿಯಲ್ಲವಲ್ಲಾ.

ಭೂತ:— ಹಾಗಾದರೆ ಪಾಪಪುಣ್ಯಗಳ ವಿಚಾರವಾದರೂ ನಿನಗೆ ತಿಳಿಯುವದಲ್ಲವೆ.

ವಿಕರ್ಣ:— ತಿಳಿಯುವದು.

ಭೂತ:— ಪರನಿಂದೆಯು ಪಾಪವಲ್ಲವೆ ?

ವಿಕರ್ಣ:— ಹೌದು.

ಭೂತ:— ಪರರಸೊತ್ತನ್ನು ಅಪಹರಿಸುವದು

ವಿಕರ್ಣ:— ಇದಂತೂ ಮಹತ್ಪಾಪ.

ಭೂತ:— ಕಪಟದ್ಯೂತವಾಡುವದು.

ವಿಕರ್ಣ:— ಘೋರಪಾಪ.

ಭೂತ:— ಆಡಿದವರಲ್ಲೊಬ್ಬರನ್ನು ಪಂಥವೆಂಬ ನೆವದಿಂದ ವನವಾಸ ಅಜ್ಞಾತವಾಸಕ್ಕೆ ಕಳಿಸುವದು.

ವಿಕರ್ಣ:— ಇದಂತೂ ಪಾಪದಲ್ಲ ಪಾಪ.

ಭೂತ:— ಪತಿವ್ರತಾಸ್ತ್ರೀಯರ ಮಾನಭಂಗಮಾಡುವದು.

ವಿಕರ್ಣ:— ಸ್ತ್ರೀಯರ ಗೋಳು ಜನುಮಾಂತರದ ಪಾಪಾ.

ಭೂತ:— ಕಂಟಕದಿಂದ ಕಡೆಗಾಗುವದಿನದಲ್ಲಿ ಪುನಃ ಸಂಕಟದಲ್ಲಿ ನೂಕುವದಕ್ಕೆ ಹೋಗುವದು.

ವಿಕರ್ಣ:— ಇದು ಪಾಪದ ಅತಿರೇಕ.

ಭೂತ:— ಈಗ ನೀನು ಏತಕ್ಕಾಗಿ ಹೊರಟಿರುವೆ ? (ವಿಕರ್ಣನು ಮಾತನಾಡದೆ ಮೌನದಿಂದ ನಿಲ್ಲುವನು ) ಏಕೆ ಪಾಪದ ನಾಲಿಗೆಯು ಒಡ ನುಡಿಯಲೊಲ್ಲದೇಕೆ ? ನುಡಿಸು, ತಡವ ಡಿದರೆ ನಾಲಿಗೆಯನ್ನು ಸೀಳಿ ಬಿಡುವೆನು. ( ಎಂದು ಕಣ್ಣು ಕಿಸಿಯುವನು. )

ವಿಕರ್ಣ: (ಭಯದಿಂದ) ನನನ ನಾನು ದುರ್ಯೋಧನನ ತಮ್ಮನು ಹೆಸರು ವಿಕರ್ಣ, ಶಕುನಿಯು ಪ್ರೇರಣೆಯಿಂದ ಪಾಂಡವರ ಅಜ್ಞಾತವಾಸವು ನಾಳೆ ಸೂರ್ಯೋದಯಕ್ಕೆ ಮುಗಿಯುವ ವಾರ್ತೆಯನ್ನು ಕೇಳಿ ಅವಧಿಯು ಪೂರ್ತಿಸುವದರೊಳಗಾಗಿ ಗುರ್ತಿಸಿ, ಪುನಃ ವನವಾಸಕ್ಕೆ ಕಳಿಸಬೇಕೆಂಬ ದುರುದ್ದೇಶದಿಂದ ದುರ್ಯೋಧನನು ಕಳಿಸಿರುವನು.

ಭೂತ:— ಈ ನಿನ್ನ ಪಾಪಕ್ಕೆ ಪ್ರಾಯಶ್ಚಿತ್ತವೇನು ಹೇಳು ?

ವಿಕರ್ಣ: ನಾನೇನೂ ಹೇಳಲಾರೆ.

ಭೂತ:— ಒಳ್ಳೇದು ನೀನು ಪಾಂಡವರ ದ್ವೇಷಿಯಾದರೂ ಪುಣ್ಯಾತ್ಮನಾದ ಧರ್ಮಮೂರುತಿಯ ಮಹತ್ವವನ್ನು ಮನಸ್ಸಿನಿಂದ ಕೇಳಿರುವೆಯಾದ್ದರಿಂದ.

ವಿಕರ್ಣ:— ಹೊರಡಲೋ ( ಎಂದು ಮುಂದೆ ಹೆಜ್ಜೆ ಯಿಡುವನು )

ಭೂತ:— ತಾಳು, ಹೆಸರು ವಿಕರ್ಣನಾದ್ದರಿಂದ ಕೊಲ್ಲದೆ ಒಂದು ಕಿವಿಯನ್ನು ಮಾತ್ರ ಕೊಯ್ದು ವಿಕಾರಮಾಡಿ ಕಳಿಸುವೆನು

ವಿಕರ್ಣ:— ಸನ್ಮಾರ್ಗದರ್ಶಕಗುರುವೆ, ಪಾಪಪೂರಿತನಾದನಾನು ಉತ್ತರಕೊಡಲು ಅಸಮರ್ಥನಾಗಿರುವೆ. ಈಗ ನನ್ನನ್ನು ಪೂರ್ಣ ಅವಯವಗಳೊಂದಿಗೆ ಬಿಟ್ಟರೆ ಆಜನ್ಮ ಪರಿಯಂತರ ಇಂತಹ ಪಾಪಪೂರಿತ ಅಪವಿತ್ರ ಕಾರ್ಯಕ್ಕೆ ಕೈಹಾಕುವದಿಲ್ಲವೆಂದು ಪವಿತ್ರಮೂರುತಿಯಾದ ಧರ್ಮಾತ್ಮನ ಪಾದವನ್ನು ಸ್ಮರಿಸಿ ಹೇಳುವೆ. ಇದರಮೇಲೆ ಚಿತ್ತಕ್ಕೆ ಬಂದಂತೆ ಮಾಡಬಹುದು.

ಭೂತ:— ಛೇ ಪೂರ್ಣಪಶ್ಚಾತ್ತಾಪದಿಂದ ಪರಿಶುದ್ಧನಾದವನನ್ನು ಶಿಕ್ಷಿಸುವದರಲ್ಲಿ ಪುರುಷಾರ್ಥವಿಲ್ಲ. ಆಗಲಿ ಮಹಾತನ ಅಲ್ಪಚರಿತ್ರೆ, ಇಂದಲೇ

ಅಜ್ಞಾನಿಯಾದ ನಿನಗೆ ಜ್ಞಾನೋದಯವಾದಂತ ಜಗತ್ತಿನಲ್ಲಿ ಮಹಾತ್ಮರ ನಿಂದಕರೆಲ್ಲರೂ ಜ್ಞಾನಿಗಳಾಗಲಿ ಹೀಗೆಬಾ ಹಾಗೇಕಳಿಸಬಾರದು ಈ ಗುರ್ತಿನ ಅಪಮಾನವು ನಿನಗಲ್ಲಾ. ನಿನ್ನ ಅಣ್ಣನಾದ ದುರ್ಯೋಧನ ಶಕುನಿಯವರಿಗೆ

( ಮುಖಕ್ಕೆ ಕಪ್ಪು ಬಡಿದು ಮಾಯವಾಗುವನು. ವಿಕರ್ಣನು ಕಪ್ಪುಮುಖವನು ಕಟ್ಟಿಕೊಂಡು ಹಿಂದಿರುಗುವನು. )

## ೨ನೇ ಪ್ರವೇಶ.

ರಣಾಂಗಣದ ಸೀನು.

ಅರ್ಜುನನು ರಥದಲ್ಲಿ ಕುಳಿತು ಉತ್ತರಕುಮಾರನೊಡನೆ ಪ್ರವೇಶಿಸುವನು. ರಣಾಂಗಣದಲ್ಲಿ ಯಾರೂ ಇಲ್ಲದಿರುವದನ್ನು ನೋಡಿ ಗಾಂಭೀರ್ಯದಿಂದ ರಥವನ್ನಿಳಿದುಮುಂದೆ ಬಂದು. )

**ಉತ್ತರ:**— ಬ್ರಹನ್ನಳೇ ಏನಿದು ಶಿವನಭೂಮಿ. ಆ ! ಪರಾಕ್ರಮಶಾಲಿಯಾದ ಸಮ್ರಾಟ ಉತ್ತಕುಮಾರ ಅಪಮಾನ ಮಾಡಬೇಕೆಂಬ ಉದ್ದೇಶದಿಂದ ಕರೆತಂದೆಯೋ ಅಥವಾ ಬೇರೆಯಾವದಾದರೊಂದು ಕಾರಣದಿಂದಲೋ ತಿಳಿಯಲಿಲ್ಲಾ. ವೈರಿಗಳಿಲ್ಲದ ಈ ಪ್ರದೇಶದಲ್ಲಿ ಸಮರಶಿಂಹನಾದ ನನ್ನನ್ನು ಕರೆತಂದು, ವೈರಿಗಳ ರಕ್ತಪ್ರಾಶನಕ್ಕಾಗಿ ಹಾತೊರೆಯುತ್ತಿದ್ದ ನನ್ನ ಖಡ್ಗದ ಆತುರತೆಯನ್ನು ಕಡಿಮೆ ಮಾಡಿದಂತಾಯಿತು. ಆಗಲಿ ಉಪಾಯವಿಲ್ಲಾ. ( ಎಂದು ಉಸಿರುಗಳೆಯುವನು )

**ಅರ್ಜುನ:**— ಯುವರಾಜಾ, ಕ್ಷತ್ರಿಯನಿಗೆ ಯಾವಾಗಲೂ ಯಾವ ಕೆಲಸದಲ್ಲಿಯೂ ಅತಿ ಆತುರತೆ ಇರಬಾರದು.

**ಉತ್ತರ:**— ಅದೇನೋ ನಿಜ ಆದರೆ ಸಾಯುವ ಪ್ರಸಂಗದಲ್ಲಿ ಸಹ ಆತುರತೆಯಿಂದ ಸಾಯಬಾರದೆ? ಬ್ರಹನ್ನಳೆ ಅಡವಿಯಲ್ಲಿ ಹಸಿದಕೇಸರಿಗೆ ಸಮಯಕ್ಕೆ ಬೇಟೆ ಸಿಗದಿದ್ದರೆ, ಮುಂದೆ ಆ ಕೇಸರಿಯು ಅತಿಕೋಪದಿಂದ ತನ್ನ ಸ್ಥಳ ಸೇರದ ವಿನಃ ಗತ್ಯಂತರವಿಲ್ಲ. ಅದರಂತೆ ಉಲ್ಹಾಸದಿಂದ ರಣಭೂಮಿಯನ್ನು ಹೊಕ್ಕ ಕಲಿವೀರ ಕ್ಷತ್ರಿಯನಿಗೆ ತಕ್ಷಣ ವೈರಿಯು ಇದಿರಾಗದಿದ್ದರೆ, ನಿರುಪಾಯನಾಗಿ ಹಿಂದಿರುಗ ಬೇಕಾಗುವದು. ಆಗ ಆ ರಣವೀರನ ಅವಸ್ಥೆ ಏನಾಗಬೇಕು? ಸಿಟ್ಟಿನಿಂದ ಬ್ರಹನ್ನಳೆ ನನ್ನಿಂದಾ

ಗದು. ಈ ರೋಷವನ್ನು ತಡೆಯುವದು. ಹೇ ಸ್ವರ್ಗಸ್ಥ ದೇವತೆಗಳಿರಾ ನಿರುಪಾಯನಾಗಿ ಹಿಂದಿರುಗುವ ಈ ನಿಮ್ಮ ವೀರಪುತ್ರನನ್ನು ಕ್ಷಮಿಸಿರಿ. (ಮೇಲೆ ನೋಡಿ ಕೇಳಿದಂತೆ ನಟಿಸಿ,) ಏನು ಬ್ರಹನ್ನಳೆಯನ್ನು ಕರೆದು ಕೊಂಡು ಹಿಂದಿರುಗಲೇ ಹಾಗೇ ಆಗಲಿ ಹೂಂ ಬ್ರಹನಳೆ ರಥವನು. ತಿರು ಗಿಸು.

**ಅರ್ಜುನಃ**— ಯುವರಾಜಾ ವರೆಯಿಂದ ಖಡ್ಗವನ್ನು ತೆಗೆದಬಳಿಕ, ರಕ್ತಪ್ರಾಶನ ಮಾಡಿಸದೆ ವರೆಗಾಣಿಸುವುದು ಕ್ಷತ್ರಿಯ ಧರ್ಮಕ್ಕೆ ಕಲಂಕ ವಲ್ಲವೆ.

**ಉತ್ತರಃ**— ಹೌದು.

**ಅರ್ಜುನಃ**— ಅದರಂತೆ ಶಸ್ತ್ರಸನ್ನದ್ಧನಾಗಿಬಂದ ಕ್ಷತ್ರಿಯನು ಅದರ ಲ್ಲಿಯೂ ರಥಾರೂಢನಾಗಿ ಸಾರಥಿಯನ್ನೊಡಗೊಂಡು ಬಂದು, ಹಿಂದಿರುಗುವ ದೆಂದರೆ ವೀರಕುಲದ ಅಪಮಾನ.

**ಉತ್ತರಃ** ಬ್ರಹನ್ನಳೆ ಕುಲದ ಅಪಮಾನವು ಕುಮಾರನಿಗೆ ಸಂಬಂಧಿ ಸುವದಿಲ್ಲ

**ಅರ್ಜುನಃ**—(ಸ್ವ) ಈ ಹೇಡಿಯು ಏನಾಹರೊಂದು ನೆವವನ್ನು ಹೇಳಿ ಇಲ್ಲಿಂದ ಪಾರಾಗಬೇಕೆಂದಿರುವನು. (ಪ್ರ)ಕುಮಾರ ಅಲ್ಲಿ ನೋಡು, ಶತ್ರು ಗಳು ಬರುವ ರಭಸದಿಂದ ಕೆಂದೂಳಿಯು ಹೇಗೆ ಏಳುತಿ ರುವದು.

**ಉತ್ತರಃ** - ಬ್ರಹನ್ನಳೆ ನಿನಗೆ ಅನುಭವ ಕಡಿಮೆ.

**ಅರ್ಜುನಃ**—ನಿಮ್ಮಷ್ಟು ಅನುಭವ ಬರಬೇಕಾದರೆ ಯುದ್ಧ ಮುಗಿಯ ಬೇಕು.

**ಉತ್ತರಃ**—ನಮ್ಮಂಥ ವೀರರಿದ್ದ ಮೇಲೆ ಯುದ್ಧ ಮುಗಿಯುವದೊಂದು ದೊಡ್ಡ ಕೆಲಸವಲ್ಲ. ಆದರೆ ಅನುಭವಬರುವದಕ್ಕೆ ಅನೇಕ ವರುಷಗಳು ಕಳೆಯಬೇಕು.

**ಅರ್ಜುನಃ**— ವರುಷವೇತಕ್ಕೆ ಒಂದೇ ಒಂದು ನಿಮಿಷದಲ್ಲಿ ಬಂದು ಹೋಗುತ್ತದೆ. ಸ್ವಲ್ಪ ತಾಳಿ (ಎಂದು ಮುಂದೆ ನೋಡಿ)ಅದೋ! ಕುಮಾರಾ ಕೌರವರ ಸೈನ್ಯವು ಸಮೀಪಕ್ಕೆ ಬಂತು.

**ಉತ್ತರಃ**—(ನಕ್ಕು) ಸುಳ್ಳು ಅಕ್ಷರಶಃ ಸುಳ್ಳು. ನಾನು ( ಅಹಂಭಾವದಿಂದ) ಕುಮಾರ ವಿರಾಟರಾಯನ ಮಗ್ಗಾ ಸಾಮ್ರಾಟ ಸಾರ್ವಭೌಮನಿರುವಾಗ ಕೌರವರು ರಣರಂಗಕ್ಕೆ ಎಂದೂ ಬರಲಾರರು. ಬಂದರೂ ಬಹಳ ಹೊತ್ತು ನಿಲ್ಲಲಾರರು ನಾನು ರಣಭೂಮಿಗೆ ಬಂದಸುದ್ದಿಯನ್ನು ವಾಯುದೇವನು ಕೌರವರ ವಂಶವು ವ್ಯರ್ಥವಾಗಿ ನಿರ್ವಂಶವಾಗುವದಲ್ಲಾ ಎಂಬ ಕನಿಕರದಿಂದ ಈಗಾಗಲೇ ತಿಳಿಸಿರಬಹುದು.

**ಅರ್ಜುನಃ**— ( **ನೋಡಿದಂತೆಮಾಡಿ** )ಓಹೊ ಸೈನ್ಯವು ತೀರಾಸಮೀಪಿಸಿತು.

**ಉತ್ತರಃ**— ಬ್ರಹನ್ನಳೆ ಇಲ್ಲಿಯ ಹವೆಯು ಚನ್ನಾಗಿಲ್ಲದ್ದರಿಂದ ಮೈಯಲ್ಲಿ ಛಳಿದುಂಬಿತು. ( ನಡುಗುವನು )

**ಅರ್ಜುನಃ**— ಕುಮಾರ ಸ್ವಲ್ಪ ಬೆಂಕಿಯನ್ನು ಹಾಕಲೇನು ?

**ಉತ್ತರಃ**— ಸುಡುವದಕ್ಕೇನು. ನೀನೊಳ್ಳೆ ಸಾರಥಿಯು, ಒಡೆಯನನ್ನು ಹೇಗೆ ಜೋಪಾನಮಾಡಬೇಕೆಂಬುದೇ ತಿಳಿಯುವದಿಲ್ಲಾ. ತಿಳಿದರೂ ಅದರಂತೆ ನಡೆಯುವದಿಲ್ಲಾ.

**ಅರ್ಜುನಃ**—ಯುವರಾಜ,ಕ್ಷತ್ರಿಯಕುಲದ ಕುಮಾರನು ಬಾಯಿಂದಾಡಿದಂತೆ ಕೃತಿಯನ್ನು ಮಾಡಿತೋರಿಸುವದು ಅವನ ಕರ್ತವ್ಯವಲ್ಲವೆ ?

**ಉತ್ತರಃ**— ಹೌದು, ಕರ್ತವ್ಯವನ್ನು ತೋರಿಸುವದಕ್ಕೂ ಹಿಂದು ಮುಂದಿನ ವಿಚಾರಬೇಕು.

**ಅರ್ಜುನಃ** — ವಿಚಾರವೇತರದು ಕುಮಾರಾ

**ಉತ್ತರಃ**— ಈಗ ನಮಗೆ ಎದುರಾಗಿ ಬರುವ ಶತ್ರುವು ಶೂರನೋ ಅಥವಾ ಪಾಪಭೀರುವೋ ಏನು ರಣಹೇಡಿಯೋ ಎಂಬದನ್ನರಿತು ನಮ್ಮ ಪರಾಕ್ರಮಕ್ಕೆ ಸಮನಾಗಿದ್ದರೆ ಅಂಥವನಕೂಡ ಯುದ್ಧಕ್ಕೆ ಸಿದ್ಧನಾಗಬೇಕು. ಹಾಗಿಲ್ಲದೆ ಯಾವನಾದರೊಬ್ಬ ಹೇಡಿಯೊಡನೆ ಯುದ್ಧಮಾಡಿ ರಣದಲ್ಲಿ ಪವಡಿಸುವದಕ್ಕೆ ಹಚ್ಚಿದರೆ ವೀರಕ್ಷತ್ರಿಯನಾಗಿ ಹೇಡಿಯನ್ನು ಕೊಲ್ಲಬಹುದೇ ಎಂಬ ಪಾಪದ ಭೀತಿಯಿಂದ ಸ್ವರ್ಗದಲ್ಲಿರುವ ನನ್ನ ಪ್ರಪಿತಾಮಹನು

ಅಲ್ಲಿಂದಲೇ ಉರುಳಿ ಭೂಮಿಗೆ ಬೀಳಲಿಕ್ಕಿಲ್ಲವೆ. ಬ್ರಹನ್ನಳೇ ನಾನಾಡುವ ಮಾತುಗಳು ಧರ್ಮಸಮ್ಮತವಾಗಿಯೂ ಶಾಸ್ತ್ರಸಮ್ಮತವಾಗಿಯೂ ಇರುವವು. ಆದ್ದರಿಂದ ನನ್ನ ವಿಷಯವಾಗಿ ಮುಂದೆ ಎಂಥಹ ಘೋರ, ಅಘೋರ ಭೀಕರ, ಭಯಂಕರವಿಲ್ಲದ ಕೃತಿಗಳು ಘಟಿಸಿದರೂ ಮನಸ್ಸಿನಲ್ಲಿ ಜರೆಯುಬೇಡ ವೈರಿಗಳಿಗೆದುರಾಗಿ ನಿಲ್ಲಿಸಬೇಡ. ಆಗಮ್ಯಾಕೃತಿಗಳನ್ನು ನನ್ನಿಂದ ಮಾಡಿಸಬೇಡ. ರಣಾಂಗಣದಲ್ಲಿ ನನ್ನಿಂದ ಅಸಂಖ್ಯ ಶತ್ರುಗಳ ಅಹುತಿ ಕೊಡಿಸಬೇಡ (ಹೀಗೆನ್ನುತ್ತ ಪೊಳ್ಳುಪೌರುಷದಿಂದ ಹೂಂ, ಬ್ರಹನ್ನಳೆ ಶತ್ರುಗಳು ಬರಲಿಲ್ಲವೆ ? ( ಇಷ್ಟರಲ್ಲಿ ವೈರಿಗಳ ಸೈನ್ಯದ ಕೂಗು ಕೇಳಬರುವದು.)

**ಅರ್ಜುನಃ**— ಆಗೋ ಕುಮಾರಾ, ಶತ್ರು ಸೈನ್ಯವು ಸಾಗರದ ಅಲೆಗಳಂತೆ ಅಪಾರವಾಗಿ ಹೇಗೆ ಬರುತ್ತಿರುವದು ಆಗೋ ರಥದಮೇಲ್ಗಡೆಯಲ್ಲಿ ಚಿನ್ನದ ಕಳಸಗಳು ಹೇಗೆ ಪ್ರಕಾಶಿಸುತ್ತಿರುವವು. ರಥದಲ್ಲಿ ಕುಳಿತುಬರುವ ಶತ್ರುಗಳ ಶಿರಸ್ಸಿನ ಮೇಲಿರುವ ವಜ್ರದ ಕಿರೀಟಗಳು ಸೂರ್ಯನ ಕಿರಣಗಳಂತೆ ಹೇಗೆ ಪ್ರಕಾಶಿಸುತ್ತಿರುವವು.

**ಉತ್ತರ**:— ಬ್ರಹನ್ನಳೆ ತಡೆ, ನಾನು ಉತ್ತರನಾದುದರಿಂದ, ಎತ್ತರವಾದ ಸ್ಥಳದಲ್ಲಿ ಉದ್ದವಾಗಿ ಎದ್ದುನಿಂತು ನೋಡಿ ಬರುವೆ ( ಅದರಂತೆ ನಿಂತು ನೋಡಿ, ಅಲ್ಲಿಂದಲೇ ಜಾರಿಬಿದ್ದು ಅಯ್ಯೋ ಅಪ್ಪಾ ಎಂದು ಎದೆ ಎದೆ ಒಡೆದುಕೊಳುತ್ತಾ )

ಏಕತಾಳ, ಪದ ರಾಗ, ದೇಸ

( ನಿನಕಂಡು ನಾ ಬಂದೆ ಎಂಬಂತೆ )

ನೋಡೆನು ವೈರಿಯ | ಭೀಕರಾಕೃತಿಯ | ತಾಳೆನು ಮನದೊಳಗಿನ ಭೀತಿಯಾ | ಘನವಾಗಿ ಬರುತಿಹ | ಘನಘೋರಾಕೃತಿಯ | ನೇತ್ರದ ಕೆಂಪೇರಿಕೃತಿಯಾ | ಯಮನಂತೆ ಯಮನಲ್ಲಿ | ಬರುವದು ಬಿಡನಲ್ಲಾ | ಎನಗಾಗುವಗತಿ ಶಿವಬಲ್ಲ | ಬಿಡೆ ನಿನ್ನ ಪಾದವಾ | ನೋಡೆನ್ನ ಖೇದವಾ | ಕೊಡಬೇಡ ವೈರಿಗೆ ಯನ್ನಜೀವಾ | ಬಿಡೆ ನಿನ್ನ ಪಾದವ ನುಹದೇವ ||

( ಎಂದು ಪಾದವನ್ನು ಗಟ್ಟಿಯಾಗಿ ಹಿಡಿದು ಕೂಡ್ರುವನು. )

**ಅರ್ಜುನಃ**— ಎಲೋ ಕುಮಾರಾ, ನಿನ್ನ ತಂದೆ ತಾಯಿಗಳು ಎಣೆಯಿಲ್ಲದ ಪಾಪಕರ್ಮವನ್ನು ಮಾಡಿರಬೇಕು ಹಿಂದಿನಜನ್ಮದಲ್ಲಿ ನೀನು ಅ

ಪಾಪದ ಫಲರೂಪವಾಗಿ ಜನಿಸಿರುವೆ ವಿರಾಟರಾಯನ ಹೊಟ್ಟೆಯಲ್ಲಿ. ಏಳು, ನೀನು ಸಾಯುವೆನೆಂದರೂ ಸಾಯಗೊಡುವದಿಲ್ಲಾ. ಭಯಪಡಬೇಡಾ.

**ಉತ್ತರ:**— (ಕೂಡಲೆ ಎದ್ದು) ಬ್ರಹನ್ನಳೇ ಅದೊಂದು ಶಬ್ದವನ್ನು ಮಾತ್ರ ಬಿಟ್ಟುಬಿಡು, ನಾನು ಗಟ್ಟಿಯಾಗಿರುವ ವರೆಗೆ.

**ಅರ್ಜುನಃ**— ಹಾಗಾದರೆ ರಥವನ್ನು ಹತ್ತು ಏಳು?

**ಉತ್ತರಃ**— ಅದೊಂದನ್ನು ಬಿಟ್ಟು ಹೇಳು?

**ಅರ್ಜುನಃ**— ಕುಮಾರಾ, ನೀನು ರಥವನ್ನು ಹತ್ತದಿದ್ದರೆ ಯುದ್ಧ ಮಾಡುವ ಬಗೆ ಹೇಗೆ?

**ಉತ್ತರಃ**— ನಾನು ಉಳಿಯುವ ಬಗೆ ಹೇಗೆ?

**ಅರ್ಜುನಃ**— ಎಲೋ ಹೇಡಿ, ನಿನ್ನ ಉಪ್ಪುತಿಂದ ಈ ದೇಹವು ನಿನ್ನನ್ನುಳಿಸದಿದ್ದರೆ ಈ ದೇಹಕ್ಕೆ ಇನ್ನ ಬೆಲೆಯೇನು?

**ಉತ್ತರಃ**— ಬೆಲೆ ಕಟ್ಟದ ವಸ್ತುವಿಗೆ ಬೆಲೆಕಟ್ಟುವರಾರು?

**ಅರ್ಜುನಃ**— ಇದು ಮಾತ್ರ ನಿಜವಾದುದು.

**ಉತ್ತರಃ**— ಅದು ಹೇಗೆ?

**ಅರ್ಜುನಃ**— ಬ್ರಹನ್ನಳೆಯ ಬೆಲೆ ಕಟ್ಟುವದು ಬ್ರಹ್ಮಾಂಡದೊಡೆಯನೊಬ್ಬನಿಗಲ್ಲದೆ, ಅನ್ಯರಿಗೆ ಸಾಧ್ಯವಾಗಲಾರದು.

**ಉತ್ತರ:**— (ಸೈನ್ಯವನ್ನು ನೋಡಿ ಮೆಲ್ಲಗೆ) ಬ್ರಹನ್ನಳೆ, ಇದು ಸಾಧ್ಯವೇನೋ ನೋಡವ್ಮಾ ಮೊದಲು.

**ಅರ್ಜುನ:**— ಉತ್ತರಾ, ನಿನಗೆ ಹೇಳಿ ಹೇಳಿ ಬೇಸರವಾಯಿತು. ಕೋಪವು ಅತಿರೇಕವಾಯಿತು.

**ಉತ್ತರ:**— ಅದರಿಂದ ನಿನಗೇನು ಕೆಡಕಾಯಿತು?

**ಅರ್ಜುನ:**— ಕೆಡಕು ನನಗಲ್ಲಾ ನಿನಗೆ.

**ಉತ್ತರ:**— ಅಂದರೆ?

**ಅರ್ಜುನ:**— ಅದೋ ವೈರಿಗಳು ಬಂದರು. ಬೇಗ ರಥವನ್ನು ಹತ್ತು, ಇಲ್ಲವಾದರೆ ಬಲಾತ್ಕಾರದಿಂದ ಹತ್ತಿಸಬೇಕಾಗುವದು.

**ಉತ್ತರ:**—( ಕೋಪಗೊಂಡಂತೆ )ಯಾರಮೇಲೆ ಬಲಾತ್ಕಾರ, ನನ್ನ ಮೇಲೆ? ಗಂಡುಗಲಿಯಾದ ರಣಕೇಸರಿಯ ಮೇಲೆ. ವಿರಾಟರಾಯನ ಕುಮಾರನ ಮೇಲೆ. ಬ್ರಹನ್ನಳೆ, ನೀನು ಸ್ತ್ರೀಯಾಗಿ ನಮ್ಮಂತಹ ಪರಾಕ್ರಮ ಶಾಲಿಗಳಾದ ಪರಮಪುರುಷರ ಮೇಲೆ. ಸ್ವಲ್ಪಾದರೂ ನಿನಗೆ ನಾಚಿಕೆಬರುವ ದಿಲ್ಲವೆ? ಬಲಾತ್ಕರಿಸುವದಕ್ಕೆ.

**ಅರ್ಜುನ:**— ( ಸಿಟ್ಟಿನಿಂದ ಕೈಹಿಡಿದು ) ಎಲೋ ಕ್ಷತ್ರಿಯಕುಲದ ಕೈಗೊಂಬೆಯೇ? ಒಡೆಯನೆಂದು ಕೈಗಾದುದಕ್ಕೆ ಕೆಣಿಕಿಕೆಣಿಕಿ ಮಾತನಾಡು ವೆಯಾ ಕೋತಿಯೆ. ( ಎಂದು ಕೈಹಿಡಿಯುವನು )

**ಉತ್ತರ:**— ಬ್ರಹನ್ನಳೇ ಈಗ ನನ್ನ ಕೈಹಿಡಿದದ್ದು ಕೈಯಿಂದಲೋ.

**ಅರ್ಜುನ:**— ಯಾಕೆ ?

**ಉತ್ತರ:** —( ಕುಗ್ಗಿ ) ಯಾಕೂ ಇಲ್ಲಾ. ಬ್ರಹನ್ನಳೇ ನೀನು ಯಾರ ನ್ನಾದರೂ ಕೊಲ್ಲುವಪ್ರಸಂಗ ಒಂದರೆ ನಿನಗೆ ಆಯುಧಗಳ ಅಗತ್ಯವಿಲ್ಲ.

**ಅರ್ಜುನ:**— ಆಯುಧಗಳಿಲ್ಲದಿದ್ದರೆ ಕೊಲ್ಲುವದೇತರಿಂದ ?

**ಉತ್ತರ:**— ಈಗ ನನ್ನ ಕೈಹಿಡಿದಿರುವ ಈ ಆಯುಧದಮುಂದೆ ಯಾವ ಆಯುಧವೂ ಸರಿಬೀಳಲಾರದು ಈಗ ನನ್ನ ಪ್ರಾಣಹೋಗುವ ಸ್ವಂತ ಅನುಭವದಮೇಲೆ ಹೇಳುತ್ತೇನೆ, ಪ್ರಮಾಣಮಾಡಿ ಹೇಳುತ್ತೇನೆ.

**ಅರ್ಜುನ:**— ಏನು ಪ್ರಾಣಹೋಗುವದಕ್ಕೆ.

**ಉತ್ತರ:**— ಹೌದು ಸ್ವಲ್ಪ ಉಳಿದಿದೆ. ಯಾವದೋ ಒಂದು ಮೂಲೆಯಲ್ಲಿ.

**ಅರ್ಜುನ:** - ಇದೋಬಿಟ್ಟೆ (ಬಿಟ್ಟು) ಹೂಂ ನಡೆ ರಥವನ್ನು ಹತ್ತು, ನಿಮ್ಮಪ್ಪನಿಗೂ ಬಿಡುವದಿಲ್ಲ,ನಡೆ ಬೇಗ. ಏಕೆ ಬರುವೆಯೋ ಯಮನಭೆಟ್ಟಿಗೆ ಹೋಗುವೆಯೊ.

**ಉತ್ತರ :**— ನಿನಗಿಂತಲೂ ಬೇರೆ ಯಮನ್ಯಾರಪ್ಪಾ ? ಅವನು ಪುಣ್ಯಾತ್ಮಾ.

**ಅರ್ಜುನ:**—(ಸಿಟ್ಟಿನಿಂದ ಬಂದು ಹೊಡೆದು) ನೆಲವನ್ನು ಬಿಡುವೆಯೋ ಬಿಡಿಸಲೋ ?

**ಉತ್ತರ:—** (ಪಾರಾಗುವಹಂಚಿಕೆಯಿಂದ) ಬೃಹನ್ನಳೆ, ಅಲ್ಲಿನೋಡು ಕಾಡಸರ್ಪವು ಹೇಗೆ ಬರುತ್ತಿರುವದು.(ಇಷ್ಟೆನ್ನುತ್ತಲೆ ಅರ್ಜುನನು ತಿರುಗಿನೋಡು ವನು. ಕುಮಾರನು ಓಡಿಹೋಗುವನು ಅದನ್ನು ಕಂಡು ಅರ್ಜುನನು ಎಳೆದುಕೊಂಡು ಬಂದು ರಥದಮೇಲೆ ಕಟ್ಟಿ ಕೂಡ್ರಿಸುವನು.) ಬೃಹನ್ನಳೆ ರಥವನ್ನು ಬಿಡಬೇಡ ಹಿಂದಿರುಗಿಸು ಬರುವಾಗ ಹೇಳಿದ್ದು ಸ್ಮರಣೆಗೆ ಬಂಲಿಲ್ಲವೇ ?

**ಅರ್ಜುನ:—** ಏನು ?

**ಉತ್ತರ:—** ಈ ದಿವಸವೇ ಸಾಯಂಕಾಲಕ್ಕೆ ನಮ್ಮ ಮುತ್ತಜ್ಜ ಎಂದಿಗುಮಾರನ ಪುಣ್ಯದಿನವಿದೆ. ಬರುವಾಗಲೇ ತಂದೆಯವರು ನಿನ್ನೆದುರಿಗೆ ಹೇಳಿದಹಾಗಿತ್ತು. ಅದು ನನ್ನ ನೆನಪಿಗೆ ಇಷ್ಟೊತ್ತಿನವರೆಗೆ ಬಂಲಿಲ್ಲಾ. ಈಗ ನೆನಪಿಗೆ ಬಂತು.

**ಅರ್ಜುನ:—** ಎಲೋ ಅಲಂಕಾರದಬೊಂಬೆ. ಈಗ ನಿನ್ನನ್ನು ಇಲ್ಲಿಂದ ನಿನ್ನ ಹಿರಿಯ ಬಂದು ಹೇಳಿದರೂ ಬಿಡುವದಿಲ್ಲಾ. ಏನಾದರೂ ಹೇಳಿ ಪಾರಾಗುವದಕ್ಕೆ ಇದು ವಿಶ್ರಾಂತಿಮಂದಿರವಲ್ಲಾ.ಚಂಡಾಲಾ ಹುಲಿಯ ಹೊಟ್ಟೆಯಲ್ಲಿ ನರಿಯು ಹುಟ್ಟಿದಂತೆ ಪುಣ್ಯಾತ್ಮನೂ ಪರಾಕ್ರಮಶಾಲಿಯೂ ಆದ ಸಾರ್ವಭೌಮ ವಿರಾಟರಾಯನ ಹೊಟ್ಟೆಯಲ್ಲಿ ಹುಟ್ಟಿ ಕ್ಷತ್ರಿಯ ಕುಲಕ್ಕೆ ಕಲಂಕವನ್ನು ತಂದಿಟ್ಟೆ (ಇಷ್ಟರಲ್ಲಿ ವೈರಿಗಳು ಸಮೀಪಕ್ಕೆ ಬರುವದನ್ನು ನೋಡಿ) ಯಾರಿವನು ? ಕೌರವಾಗ್ರಗಣ್ಯಾ ಪಾಂಚಾಲಿಯ ಮಾನಭಂಗಕ್ಕೆ ಸೂಚನೆಕೊಟ್ಟು, ಸಭೆಯಲ್ಲಿ ಸುಮ್ಮನೆ ಕುಳಿತ ಕುಲಗೇಡಿ ಪಾಂಡವರ ವಂಶವೃಕ್ಷವನ್ನೇ ಕತ್ತರಿಸಲು ಎಣಿಕೆಹಾಕಿದ ಭೀಮದೇವನ ಹರಿಕೆಯುಕೋಣ. ಪ್ರಭೋ ಪಾಂಡವ ಪರಿಪಾಲಕ ನಿನ್ನ ಪ್ರಿಯಸಖ ಪಾರ್ಥನ ಪ್ರಾರ್ಥನೆಯಂತೆ ಆತನ ಪಂಥವನ್ನು ವನವಾಸದಲ್ಲಿ ಸಹ ಒದಗಿಸಿ ಕೊಟ್ಟು ಪರೋಕ್ಷದಲ್ಲಿಯೇ ಇದ್ದು, ಸದ್ದಿಲ್ಲದೆ ಸಕಲಕಾರ್ಯಗಳನ್ನೂ ಈಡೇರಿಸುತ್ತಿರುವೆಯಲ್ಲವೆ. ಇದಲ್ಲದೆ ಈ ದಿನ ರಣಾಂಗದ ಪ್ರಥಮ ದರ್ಶನ ದಲ್ಲಿ ನಿನ್ನ ಸಹೋದರಿ ಪಾಂಚಾಲಿಯ ಅಪಮಾನಕ್ಕೆ ಮುಖ್ಯ ನಾಯಕನಾದ ದುರುಳ ದುರ್ಯೋಧನನ ದರ್ಶನವಾದ್ದರಿಂದ ಆನಂದಸಾಗರದಲ್ಲಿ ಮುಳ ಗೇಳುತ್ತಿರುವೆ.

ಉತ್ತರ: — (ಕೊತಲ್ಲಿಯೇ) ವಾಸುದೇವ, ದುಃಖಸಾಗರದ ಹಗ್ಗಗಳಿಂದ ಬಿಗಿಯಲ್ಪಟ್ಟ ಈ ನಿನ್ನ ವೀರಪುತ್ರನನ್ನು ಮಾಯದಿಂದ ಮುಕ್ತಮಾಡಿಬಿಡು. ಕುರುಡಿಗೆ ಸಹ ಸಿಗದೆ, ಹಿಂದಿರುಗಿ ನೋಡದೆ, ಒಂದೇ ವೇಗದಿಂದ ಓಡಿಹೋಗಿ ಅರಮನೆಯ ವಿಶ್ರಾಂತಿಮಂದಿರವನ್ನು ಸೇರಿ, ನನ್ನ ದಾರಿಯನ್ನೇ ನೋಡುತ್ತಿದ್ದ ಬಾಲಬಾಲಿಕೆಯರ ಮನದಿಚ್ಛೆಯನ್ನು ನೆರವೇರಿಸಿ, ನಿನ್ನ ಸ್ಮರಣೆಯನ್ನು ಭರದಿಂದ ನಿದ್ರೆಹತ್ತಿದಾಗ ಬಹು ಭಕ್ತಿಯಿಂದ ಮಾಡಿ ಪುನೀತನಾಗುವೆನು.

ಅರ್ಜುನ:— ಎಲೋ ಕರೆಯುವದಕ್ಕೆ ಹೆಸರಿಲ್ಲದವನೇ, ಅಂತಃಪುರದ ವಿಶ್ರಾಂತಿಮಂದಿರದಲ್ಲಿ ಈಗ ನೀನು ಯಾವ ಸ್ವಾಮಿಯನ್ನು ಯಾವ ಬಾಯಿಂದ ಕೊಂಡಾಡಿದೆಯೋ, ಅದೇ ಪುಣ್ಯಮೂರ್ತಿಯನ್ನು, 'ಅವನೇನು ಮಹಾ' ಎಂದು ನಿಂದಿಸಿದೆಯಲ್ಲವೇ. ಅಂದಮೇಲೆ ನಿನಗೇನೆನ್ನಬೇಕು, ನೀನೇ ಹೇಳು.

ಉತ್ತರ:— ನನ್ನನ್ನು ಕೇಳದರೆ ಏನೂ ಇಲ್ಲಾ, ಯಾಕೆಂದರೆ ಹಾಗೆನ್ನುವದಕ್ಕೆ ಬಲವಾದ ಕಾರಣವಿದೆ.

ಅರ್ಜುನ:— ಮಹಾರಾಯಾ, ನಿನಗೇನು ಮಾಡಬೇಕು, ಅದೇ ತಿಳಿಯದಾಗಿದೆ.

ಉತ್ತರ:— ತಿಳಿಯದಿರುವದಕ್ಕೆ ನಾನಿಲ್ಲಿಯವರೆಗೆ ಉಳಿದಿರುವದು. ಬೃಹನ್ನಳೆ ನಾನು ವಿಶ್ರಾಂತಿಮಂದಿರದಲ್ಲಿ ಅಂತಹ ಘನವಾದ ಮಾತುಗಳನ್ನೇ ತಕ್ಕಾಡಿದೆ. ಇದರ ಪೂರ್ಣವಿಚಾರವನ್ನು ಮಾಡಿರುವೆಯಾ ?

ಅರ್ಜುನ:— (ಅಲಕ್ಷ್ಯದಿಂದ) ಇಲ್ಲಾ.

ಉತ್ತರ:— ಬೃಹನ್ನಳೆ ಜಗತ್ತಿನಲ್ಲಿ ಮಾಡಬಾರದ ಕೆಲಸಗಳನ್ನೂ ಆಡಬಾರದ ನುಡಿಗಳನ್ನೂ ಆಡಿಸುವ ವಸ್ತುಯಾವದು ? ಸರಿಯಾಗಿ ಉತ್ತರ ಕೊಡು, ಅಂದರೆ ನಿನ್ನ ಜೊತೆಯಲ್ಲಿ ಸಂದೇಹವಿಲ್ಲದೆ ನಿನಗೆ ಏನೊಂದೂ ತೊಂದರೆಕೊಡದೆ ಒಂಟಿಗಾಲಿನಿಂದ ನಿಲ್ಲುತ್ತೇನೆ ಯುದ್ಧಕ್ಕೆ

ಅರ್ಜುನ :— ಲೋಕದಲ್ಲಿ ಅನಾಹುತಗಳಾಗಬೇಕಾದರೆ ಹೆಣ್ಣು, ಮಣ್ಣು, ಹೊನ್ನು ಈ ಮೂರರವಿನಃ ಬೇರೊಂದಿಲ್ಲಾ.

**ಉತ್ತರ:** ಆಹಾ ! ಅಂದಮೇಲೆ ಲೋಕದಲ್ಲಿ, ಒಂದು ಹೆಣ್ಣನ್ನು ದೊರಕಿಸಬೇಕಾದರೆ ಎಷ್ಟೋಮಂದಿ ಕಷ್ಟಪಟ್ಟು ಹೆಣ್ಣಿನ ಮನೆಯವರೆದುರಿಗೆ ಇಲ್ಲದ್ದೊಂದು ಹೇಳಿ ಒಪ್ಪಿಸಬೇಕಾಗುತ್ತಿದೆ. ಇಂತಹದರಲ್ಲಿ ಸುಂದರವಾದ ನಾಲ್ಕಾರು ಹೆಣ್ಣುಗಳು ತೊಂದರೆ ಇಲ್ಲದೆ ನನ್ನನ್ನು ಬಿಡದೇಹೊಂದಿ ಮುಂದೆ ಆಡ್ಡಾಡುತ್ತಾ ವಿಶ್ರಾಂತಿಮಂದಿರದಲ್ಲಿ ನನ್ನ ಸುತ್ತಲೂ ನನ್ನನ್ನೇ ನೋಡುತ್ತ ನಿಂತಿರುವಾಗ ನಾನು ಎಷ್ಟು ಪೌರುಷ ಕೊಚ್ಚಬೇಕು, ಎಷ್ಟು ಸುಳ್ಳು ಹೇಳಬೇಕು, ನೀನೇ ಹೇಳಿಬಿಡು.

**ಅರ್ಜುನ:—** ಆಗುವದಿಲ್ಲಾ ದೊಡ್ಡಪ್ರಶ್ನೆ.

**ಉತ್ತರ:—** ಅಂದಮೇಲೆ ಅವರ ಮುಂದೆ ಹಾಗೆ ನಟಿಸದ್ದು ತಪ್ಪೆ ?

**ಅರ್ಜುನ:—** ಇಲ್ಲಾ ನಿಮ್ಮ ಉಪ್ಪಿನಿಂದ ನಾನು ಉಂಡಾಡಿಗನಾದ ನಿನಗೆ ಉಡಾಳನಂತೆ ಸಾರಥಿಯಾಗಿ ಬಂದಿರುವದುನನ್ನ ತಪ್ಪು (ಹೀಗೆ ಅನ್ನುತ್ತಾಮುಂದೆ ನೋಡಿ)

**ಉತ್ತರ:—** (ಕುಮಾರನೂ ನೋಡಿ) ಯಾರೂ ಇಲ್ಲಾ. ಇನ್ನೂ ಬಹುದೂರದಲ್ಲಿರುವರು ಪಾಪ. ನೀನು ಈಗಲೇ ಸಿಟ್ಟಗೆದ್ದಿರುವೆ.

**ಅರ್ಜುನ:** —ಕುಮಾರಾ ಅದರ ಅಂತರಂಗವು ನಿನಗೆ ಹೇಗೆ ತಿಳಿಯಬೇಕು. ಎಲೋ ಅಂಧಪುತ್ರನಾದ ದುರ್ಮದಾಂಧ ದುರ್ಯೋಧನಾ ಮಹಾತ್ಮನ ಆಜ್ಞೆಗೆ ಕಟ್ಟುಬಿದ್ದು, ಕೈಕಾಯುತ್ತ ಬಂದುದಕ್ಕಾಗಿ ಎಷ್ಟು ಹಿಂಸೆ ಕೊಟ್ಟರೂ, ಏನು ಬೇಕಾದದ್ದನ್ನು ಮಾಡಿದರೂ, ನಿರ್ಗತಿಕರಾದ ಇವರಲ್ಲೇ ನಿವೆ ಎಂಬ ಹೆಮ್ಮೆಯಲ್ಲವೆ ನಿನಗೆ, ಚಾಂಡಾಲಾ ಪಾಂಡವರ ಪಂಚಪ್ರಾಣನಾದ ಪರಮ ಪುರುಷನು ನಮ್ಮನ್ನು ಮಕ್ಕಳಂತೆ ತನ್ನ ಕುಕ್ಷಿಯಲ್ಲಿಟ್ಟುಕೊಂಡು ಸಲಹುತ್ತಿರುವನೆಂಬುದು ನೀಚರೊಡೆಯನಾದ ನಿನಗೆ ಹೇಗೆ ತಿಳಿಯಬೇಕು ಪ್ರಭೋ, ಕೃಷ್ಣಾ, ಸಖಾ, ಜಗದ್ರಕ್ಷಕಾ, ಇದುವರೆಗೂ ನಮ್ಮನು ಕಾಪಾಡುತ್ತ ಬಂದಂತೆ ಈಗ ಪಾಂಡವರು ಕಡೆಗಾಣುತ್ತಿರುವ ಕಂಟಕದಿಂದ ಕಾಪಾಡುವ ಭಾರವು, ಕರಿವರದ ಕರುಣಾಮೂರುತಿಯಾದ ನಿನದಲ್ಲವೆ. ಕೃಷ್ಣಾ, ದುರ್ಯೋಧನನ ಹೆಸರನ್ನೆತ್ತುತ್ತಲೇ ಹೃದಯದಲ್ಲಿಯ ವಡವಾಗ್ನಿಯು ತನ್ನಿಂದತಾನೇ ಸ್ಫೋಟವಾಗುತ್ತಿರುವದು. ಅರ್ಜುನನ ಕೋಪವೆಂಬ ಯಜ್ಞ

ಕುಂಡದಲ್ಲಿ, ಪಾಪಿಗಳಾದ ಕೌರವರ ರಕ್ತವೆಂಬ ಘೃತವನ್ನು ಸುರಿಸಿದವಿನಃ ಸಂತಪ್ತವಾದ ನನ್ನ ಮನವು ಶಾಂತವಾಗಲಾರದು ಅಣ್ಣಾ, ಇನ್ನು ಮೇಲೆ ಮಾತ್ರ ನಿನ್ನ ಆಜ್ಞೆಯನ್ನು ನಡೆಸುವದಿಲ್ಲಾ. ಅರ್ಜುನನು ಅವಿವೇಕಿಯೆಂದು ಸಿಟ್ಟಾದರೂ ಸರಿಯೆ( ಹಿಗೆನ್ನುತ್ತಾ ಮತ್ತೊಂದುಕಡೆಗೆ ನೋಡಿ) ಇವನಾರು ! ಓಹೋ ಅರ್ಜುನನ ಬಹುದಿನದ ಬಯಕೆಯನ್ನು ಪೂರೈಸಲು ಬಂದ ಪಾಂಡವರ ರಕ್ತಾಭಿಷೇಕ ಪ್ರತಿಜ್ಞೆಯ ಭಂಡವಾತಿನ ಲಂಬಕರ್ಣಾ! ಧರ್ಮಜಾ, ಇನ್ನುಮಾತ್ರ ಅರ್ಜುನನು ಸರ್ವತಂತ್ರ ಸ್ವತಂತ್ರನು, ಸ್ವೇಚ್ಛಾ ಪ್ರವರ್ತಕನು, ಎಲೋ ಕಪಟಿ ಕುರುಕುಲವಿನಾಶಕಾ ನೋಡು, ಮಾತೃಭೂಮಿಯ ಸ್ವಾತಂತ್ರ್ಯಕ್ಕಾಗಿ ಏಕಾಂಗಿಯಾಗಿ ಬಂದಿರುವ ಕಲಿಪಾರ್ಥನ ಕೈಚಳಕವನ್ನು ( ಎಂದು ತಿರುಗಿ ನೋಡುವಷ್ಟರಲ್ಲಿ ಉತ್ತರನು ಕಟ್ಟಿದ್ದ ಹಗವನ್ನು ಬಿಚ್ಚಿಕೊಂಡು ಊರಕಡೆಗೆ ಭರದಿಂದ ಓಡುತ್ತಿರುವನು ಎಲೋ ಉತ್ತರಾ, ನಿನ್ನನ್ನಿಲ್ಲಿ ಬಿಡುವೆ ಎಂದು ಬೆನ್ನುಹತ್ತಿ ಹೋಗುವನು. ಜಂಗಲ್ ರಸ್ತಾಪರದೆಯು ಬೀಳುವದು. )

## ೩ನೇ ಪ್ರವೇಶ

ದುರ್ಯೋಧನ, ಕರ್ಣ ಪ್ರವೇಶಿಸುವರು.

**ದುರ್ಯೋಧನ:**— ಕರ್ಣಾ ಈ ಮೊದಲು ಬಹಳ ಭಯದಲ್ಲಿದ್ದೆ

**ಕರ್ಣ:**— ಅಂತಹದೇನು ರಾಜಾ.

**ದುರ್ಯೋಧನ:**— ವಿರಾಟನ ಹೆಸರು ದೂರದಿಂದಲೇ ಕೇಳಿ ಸೈನ್ಯವು ಅಪಾರವಾಗಿರಬಹುದೆಂದು ಅನುಮಾನವಿತ್ತು.

**ಕರ್ಣ:** – ರಾಜಾ ದುರ್ಯೋಧನಾ, ಕರ್ಣನುಯಾವಸ್ಥಳದಲ್ಲಿರುವನೋ ಅಲ್ಲಿ ಅನುಮಾನ ಮತ್ತೂ ಅದರ ಜೊತೆಯು ಭಯ ಇವೆರಡೂ ಇರಕೂಡದು ಇರಲು ಶಕ್ಯವೂ ಇಲ್ಲಾ.

**ದುರ್ಯೋಧನ:**— ಕರ್ಣರಾಜಾ, ಮೊದಲು ನಾನು ನೆನೆದದ್ದೇ ಬೇರೆ, ಆದಿರುವದೇ ಬೇರೆ.

**ಕರ್ಣ:**— ಆದೇನು ?

**ದುರ್ಯೋಧನ:—** ವಿರಾಟನ ಸೈನ್ಯವು ಸಮುದ್ರದಂತೆ ನೆಲೆಇಲ್ಲದಾಗಿರುವದೆಂದೂ, ನಮ್ಮ ಸೇನೆಗಿಂತಲೂ ಇಮ್ಮಡಿಯಾಗಿರುವದೆಂತಲೂ ಕೇಳಿದ್ದೆ. ಇಲ್ಲಿ ಬಂದು ನೋಡಿದರೆ ಆಡಿನಮೊಲೆ.

**ಕರ್ಣ:—** ಅಂದರೆ?

**ದುರ್ಯೋಧನ:—** ಎರಡೇ ಎರಡು ನೊಣಗಳು.

**ಕರ್ಣ:—** ಸಖಾ, ಆ ನೊಣಗಳ ಸುಳಿವೂ ಇಲ್ಲಾ.

**ದುರ್ಯೋಧನ:—** ಉಳಿದವರು ಸತ್ತಿರಬೇಕು.

**ಕರ್ಣ:—** ಸತ್ತಿದ್ದರೆ ಸುದ್ದಿ ತಿಳಿಯುತ್ತಿತ್ತು ಪಾಪ!

**ದುರ್ಯೋಧನ:—** ಮಿತ್ರಾ ಕರ್ಣಾ ಜಗತ್ತಿನಲ್ಲಿ ದೇವನಿರ್ಮಿತಗಳಾದ ವಸ್ತುಗಳು ಅನೇಕವಿವೆ. ಆದರೆ ಮನುಷ್ಯನು ಎಂದೂ ನೋಡದಿರುವ ವಸ್ತು ಯಾವದು ಎಲ್ಲಿರುವುದು ಹೇಳು?

**ಕರ್ಣ:—** ರಾಜಾ ಇದೇನೋ ನನಗೆ ಒಂದೂ ತಿಳಿಯಲಿಲ್ಲಾ.

**ದುರ್ಯೋಧನ:—** ಕರ್ಣಾ, ನೀನಿಂತಹ ಜಗದೇಕ ವೀರನಾಗಿದ್ದು ಇಂತಹ ವಿಷಯವು ತಿಳಿಯಲಿಲ್ಲವೆಂದಮೇಲೆ ಆಶ್ಚರ್ಯ!

**ಕರ್ಣ:—** ದುರ್ಯೋಧನರಾಜಾ, ಕಾಣದಿರುವ ವಸ್ತುಗಳು ಕಂಡರೆ ಹೇಳಬಹುದು.

**ದುರ್ಯೋಧನ:—** ( ನಗುತ್ತ ) ಮಿತ್ರಾ, ಅಲ್ಲಿನೋಡು ಅದೇನು ಹೆಣ್ಣೋ?

**ಕರ್ಣ:—** ( ನೋಡಿ ) ಅಲ್ಲಾ.

**ದುರ್ಯೋಧನ:—** ಹಾಗಾದರೆ ಗಂಡೋ ?

**ಕರ್ಣ:—** ಅಲ್ಲಾ ?

**ದುರ್ಯೋಧನ:—** ಎರಡಕ್ಕೂ ಮಧ್ಯದಲ್ಲಿರುವ ವ್ಯಕ್ತಿ! ನೋಡು, ಆ ಹುಡುಗನನ್ನು ಬೆನ್ನುಹತ್ತಿ ಹೇಗೆ ಹೋಗುತ್ತಿರುವದು. ಇದು ಸೃಷ್ಟಿಯ ನಿರ್ಮಾಣದ ವ್ಯತಿರಿಕ್ತ. ಇದೇ ಬ್ರಹ್ಮನ ಕುಯುಕ್ತಿ ಸೃಷ್ಟಿಯ ನಿವಾಳಿಗಾಗಿ ಬೊಂಬೆಯಂತೆ ಮಾಡಿ ಒಗೆದಿದ್ದಾನೆ ಮಾದರಿಗಾಗಿ.

**ಕರ್ಣ**:—( ದಿಟ್ಟಿಸಿನೋಡಿ ) ರಾಜಾ ದುರ್ಯೋಧನಾ ಈಗ ನೀನು ಬಹಳವಾಗಿ ಜರಿದ ವ್ಯಕ್ತಿಯನ್ನು ಚನ್ನಾಗಿ ನೋಡಿದೆ ಏನು ?

**ದುರ್ಯೋಧನ**:—ಏಕೆ ?

**ಕರ್ಣ**: ಆ ವ್ಯಕ್ತಿಯ ಅಜಾನು ಬಾಹುಗಳಾದ ತೋಳುಗಳನ್ನು ನೋಡಿದರೆ ಬಹುಶಃ ಆ ತೋಳುಗಳು ಧನುರ್ವಿದ್ಯಾಭ್ಯಾಸ ಮಾಡಿದವುಗಳಾಗಿರಬೇಕು. ರಾಜಾ ಏನಿದ್ದರೂ ಆ ವ್ಯಕ್ತಿಯು ಸ್ತ್ರೀವ್ಯಕ್ತಿಯೆ ಆದರೆ ಶಕ್ತಿಸ್ವರೂಪಿಣಿ ( ಅಷ್ಟುವಷ್ಟರಲ್ಲಿ ಅರ್ಜುನನು ಉತ್ತರನನ್ನು ಎಳೆದು ಕೊಂಡು ಬರುವನು. )

**ಉತ್ತರ**:–( ಅಳುತ್ತಾ ) ಬೃಹನ್ನಳೆ ನನಗೇಕೆ ಈ ಯಮಹಿಂಸೆ ಕೊಡುತ್ತಿರುವೆ ? ಬಿಟ್ಟುಬಿಡು. ನಮ್ಮಪ್ಪನ ಹೆಸರು ಹೇಳದೆ ಇವತ್ತಿನಿಂದ ನಿನ್ನ ಹೆಸರು ಹೇಳುತ್ತೇನೆ

**ಅರ್ಜುನ**: ಥೂ ಹೇಡಿ, ಮಾತಾಡಬೇಡ.

**ಉತ್ತರ**:—ಬೃಹನ್ನಳೆ, ನಿನಗೆ ಮಕ್ಕಳ ಕರುಣವೇ ಗೊತ್ತಿಲ್ಲಾ. (ಸ್ವ) ಮಕ್ಕಳಾಗಿದ್ದರೆ ಗೊತ್ತಾಗಬೇಕಷ್ಟೇ !

**ಅರ್ಜುನ**: ನನ್ನ ಮಕ್ಕಳಲ್ಲಿ ಯಾರಾದರೂ ಹೀಗೆ ಹೇಡಿಗಳಾಗಿದ್ದರೆ ಹುಟ್ಟಿದಾಗಲೇ ಕತ್ತರಿಸಿ ಸಕ್ಕರೆಯನ್ನು ಹಂಚುತ್ತಿದ್ದೆ. ಮೇಲೆ ದಕ್ಷಿಣೆಯನ್ನು ಕೊಡುತ್ತಿದ್ದೆ. ( ಬೇಸರದಿಂದ ) ಎಲೋ ಉತ್ತರ ನೀನೆಂತಹ ಯುವ ರಾಜನೊ ?

**ಉತ್ತರ**:—ಒಬ್ಬರು ಸತ್ತನಂತರ ಪಟ್ಟಕ್ಕೆ ಕೂಡುವ ಯುವರಾಜ.

**ಅರ್ಜುನ**:—ಸುಮ್ಮನಿರುವಮೊಳ್ಳೆದು.

**ಉತ್ತರ**:—ಅಷ್ಟುಮಾಡು ಮಹಾರಾಯಳೆ, ನಿನ್ನ ಕಾಲಿಗೆ ಬೀಳುವೆ.

**ಅರ್ಜುನ**: ಹೂಂ ನಡೆ, ನೀನು ಏನು ಹೇಳಿದರೂ ನಿನ್ನನ್ನು ಬಿಡುವದಿಲ್ಲಾ. ಸತ್ತರೆ ಸಹ ಹೆಣವನ್ನೇ ಎತ್ತಿಹಾಕುತ್ತೇನೆ ರಥಕ್ಕೆ.

**ಉತ್ತರ**:—ಹಾಗಾದರೆ ಮನೆಗೆ ಹೋಗಿ ಅಮ್ಮನನ್ನು ಕೇಳಿಬರುತ್ತೇನೆ. ಬೃಹನ್ನಳೆ, ನೀನು ಸಂಶಯಪಡಬೇಡ, ಅನುಮಾನವನ್ನು ಹಿಡಿಯಬೇಡ, ಕಳಿಸದೆ ಬಿಡಬೇಡ, ಹೋದಮೇಲೆ ಕರೆಯಬೇಡ, ಬರುವೆ. ( ಹೊರಡಲುದ್ಯುಕ್ತನಾಗುವನು )

**ಅರ್ಜುನಃ**—( ಕೈಯೊಳಗಿನ ಚಾವಟಿಯ ಸಪ್ಪಳಮಾಡಿ )ಹಾ ನಿಲ್ಲು; ಮುಂದೆ ಒಂದು ಅಡಿಯನ್ನಿಟ್ಟರೆ ಹಲ್ಲುಗಳನ್ನೇ ಉದುರಿಸಿಬಿಟ್ಟೇನು. ಹೇಡೀ ಸುಮ್ಮನಿದ್ದ ಹಾಗೆಲ್ಲಾ ಹುಚ್ಚುಚ್ಚು ಮಾಡುವೆಯಾ ?

**ಉತ್ತರಃ**— ನಿಚ್ಚಳವಮಾಡುವದಕ್ಕೆ ನಾನು ಬೇಡವೆಂದೆನೆ ?

**ಅರ್ಜುನಃ**— ಹೇಗೆ ಕೇಳಿದರೂ ಅದಕ್ಕೆ ತಕ್ಕ ಉತ್ತರಕೊಡುವ ಈ ಚಮತ್ಕೃತಿಯನ್ನು ಎಲ್ಲಿಕಲಿತೆ ?

**ಉತ್ತರಃ**— ಬೃಹನ್ನಳೇ ನನ್ನ ಹೆಸರೇನು ?

**ಅರ್ಜುನಃ**— ಉತ್ತರ

**ಉತ್ತರಃ**—ಅಲ್ಲೇ ಈ ಅಭ್ಯಾಸ ಆದದ್ದು

**ಅರ್ಜುನಃ**—ಇದರ ಬದಲಾಗಿ ಕ್ಷತ್ರಿಯ ಧರ್ಮಕ್ಕನುಸಾರವಾದ ಯುದ್ಧದ ಅಭ್ಯಾಸ ಮಾಡಿದ್ದರೆ ?

**ಉತ್ತರಃ**—ಬೃಹನ್ನಳೆ ಕ್ಷತ್ರಿಯ ಧರ್ಮಕ್ಕನುಗುಣವಾದ ಯುದ್ಧಗಳು ಯಾವು?

**ಅರ್ಜುನಃ**— ಖಡ್ಗಯುದ್ಧ, ಗದಾಯುದ್ಧ, ಮಲ್ಲಯುದ್ಧ, ಮುಷ್ಟಿಯುದ್ಧ ( ಎಂದು ಕೈಮುಷ್ಟಿಮಾಡಿ ತೋರಿಸುವನು. ಉತ್ತರನು ಅದನ್ನು ನೋಡಿ )

**ಉತ್ತರಃ**— ಈ ಅಭ್ಯಾಸವು ನನ್ನಲ್ಲಿ ಚನ್ನಾಗಿದೆ.

**ಅರ್ಜುನಃ**—ಇದನ್ನು ವೈರಿಗಳ ಮೇಲೆ ಪ್ರಯೋಗಿಸಬಹುದಲ್ಲಾ ?

**ಉತ್ತರಃ**—ಈಗಿನ ನವೀನ ಶೋಧನೆಯಂತೆ ವೈರಿಗಳು ಯಾವದಕ್ಕೂ ಮಣಿಯದಿದ್ದರೆ ಕಡೇ ಉಪಾಯವೆಂದು ಇಟ್ಟಿದ್ದೇನೆ ಮೀಸಲಾಗಿ.

**ಅರ್ಜುನಃ**—ಶಹಬಾಶ ಹೀಗಿರಬೇಕು ಬುದ್ಧಿ.

**ಉತ್ತರಃ**—ಅದೇ ನನಗೆ ಕೊನೆಯುಸಿದ್ಧಿ.

**ಅರ್ಜುನಃ**— ಎಲೋ ಕುಮಾರಾ, ಅದರ ಜೊತೆಗೆ ಗದಾಯುದ್ಧವನ್ನೇಕೆ ಕಲಿಯಲಿಲ್ಲಾ ?

**ಉತ್ತರಃ** · ನಮ್ಮ ತಂದೆಯವರು ಅಪ್ಪಣೆಕೊಡಲಿಲ್ಲಾ.

**ಅರ್ಜುನಃ**—ಏಕೆ ?

**ಉತ್ತರಃ** -- ಒಬ್ಬನೇ ಮಗನಾದ್ದರಿಂದ .

**ಅರ್ಜುನಃ** — ಒಬ್ಬನಾದರೇನಾಯಿತು ?

**ಉತ್ತರಃ** — ಹಾಗಲ್ಲಾ, ಉಳಿದ ಯುದ್ಧಗಳು ಅಪಾಯವಾದವುಗಳು. ಇದೊಂದಿದ್ದರೆ ಸಾಕೆಂದು ಹೇಳಿದರು. ಅದಕ್ಕೆ ಮನಸ್ಸುಹಾಕಿದೆ ದೇವರು ಜಯವನ್ನು ಕೊಡುತ್ತಾ ಸುಖವಾಗಿಟ್ಟಾನೆ ಇಲ್ಲಿಯವರೆಗೂ.

**ಅರ್ಜುನಃ**—( ನಗುತ್ತ ಸುಮ್ಮನಿದ್ದು ) ಹೂಂ ಕುಮಾರಾ ಹತ್ತು

**ಉತ್ತರಃ**—ಯಾರ ಮೇಲೆ ?

**ಅರ್ಜುನಃ** ಎಲೋ ಯಾರ ಮೇಲಲ್ಲಾ ಅದೋ ಆ ರಥದಮೇಲೆ

**ಉತ್ತರಃ**—ಬ್ರಹನ್ನಳೆ, ಅದನ್ನು ಮರೆಯುವದಕ್ಕಾಗುವದಿಲ್ಲವೆ ನಿನಗೆ?

**ಅರ್ಜುನಃ** — ನೀನು ಅರಮನೆಯನ್ನು ಮರೆತಾಗ ನಾನು ರಥವನ್ನು ಮರೆಯುವದು.

**ಉತ್ತರಃ** —ಆಗಲಿ ಮಹಾರಾಯಳೇ, ನನ್ನ ಸಮಾಧಿಯನ್ನು ಇಲ್ಲೇ ತಯಾರಿಸಬೇಕೆಂದು ನಿನ್ನ ತಯಾರಿ ಇರುವಾಗ ನನ್ನ ಉಪಾಯವೇನೂ ನಡೆಯುವದಿಲ್ಲಾ. ಆಗಲಿ, ಅದೋ ವೈರಿಗಳು ಬಂದವರು ಅಲ್ಲಿಂದಲೇ ತಿರುಗಿ ಹೋದರು. ಪುನಃ ಬರುವವರೆಗೆ ಇಲ್ಲೇ ಇದ್ದು ಸ್ವಲ್ಪ ವಿಶ್ರಾಂತಿ ಹೊಂದೋಣ.

**ಅರ್ಜುನಃ**— ನಡ, ಆ ಒಟು ವೃಕ್ಷದ ಕಳಗ ರಥವನ್ನು ನಿಲ್ಲಿಸಿ ನಿನ್ನ ಹೇಳಿಕೆಯಂತೆ ವಿಶ್ರಾಂತಿಯನ್ನು ಹೊಂದೋಣ. (ಸ್ವ) ಈ ಹೇಡಿಯ ಮಾತುಗಳನ್ನು ಕೇಳುವದಕ್ಕೆ ಬೇಸರ ಬರುತ್ತಿದೆ. ಆದರೆ ಉಪಾಯವಿಲ್ಲಾ ( ಎನ್ನುತ್ತಾ ಗಿಡದಕಡೆಗೆ ಹೋಗುವರು )

( ರಸ್ತಾಪರದೆ ಬೀಳುವದು. ಹಿಂದೆ ಅರಮನೆಯ ಪಟಾಂಗಣದಲ್ಲಿ ಭೀಷ್ಮ ಶಕುನಿ, ದ್ರೋಣ ಮೊದಲಾದವರು ಯೋಚಿಸುತ್ತಾ ಕುಳಿತಿರುವರು )

**ಭೀಷ್ಮ**:—ಆಚಾರ್ಯರೆ ಈ ಸತ್ಯಮೂರುತಿಯಾದ ಧರ್ಮರಾಯನ ಪುಣ್ಯವೆಷ್ಟಿರಬೇಕು. ಧನ್ಯ ಧನ್ಯ ಮಹಾತ್ಮಾ ನಿನ್ನ ಶಾಂತತೆಗೆ ನಮ್ಮಿಬ್ಬರ

ವಂದನೆಗಳು. ನೀನಿದ್ದ ದೇಶದಲ್ಲಿ ಅನಾಹುತಗಳಿಗೆ ಅವಕಾಶವಿಲ್ಲಾ. ಒಂದು ವೇಳೆ ಗಲಭೆಗಳಾದರೂ ನಿನ್ನ ಏಕನಿಷ್ಠೆಯ ವ್ರತಶಕ್ತಿಯಿಂದ ಹತ್ತುಸಾವಿರ ಸೈನ್ಯದ ಕಠಿಣ ಶಿಕ್ಷೆಗೆ ಶಾಂತವಾಗದಿದ್ದ ದೊಂಬೆಗಳು ಪವಿತ್ರವಾದ ನಿನ್ನ ದೊಂದು ವ್ರತದಿಂದ ತಕ್ಷಣ ತಣ್ಣಗಾಗಿ ತಳಹಿಡಿದು ಕೂಡ್ರುವವು.

**ಕರ್ಣಃ**—(ನಸುನಕ್ಕು) ಆಚಾರ್ಯರೆ ಬೇಕಾದವರನ್ನು ಹೊಗಳ ವದು ಲೋಕರೂಢಿ. ಅದರಲ್ಲಿಯೂ ಭಾರತದ ವಯೋವೃದ್ಧರಲ್ಲಿ ಹೆಚ್ಚಿನ ರೂಢಿ. ಬೇಕಾದಾಗ ಅಟ್ಟಕ್ಕೇರಿಸುವದು, ಬೇಡವಾದಾಗ ಏನಾದರೊಂದು ಅನಾವಶ್ಯಕ ಹೆಸರಿನ್ನಿಟ್ಟು ಅಟ್ಟಿಬಿಡುವದು. ಈ ಬೊಟ್ಟೆಗುಣವು ಭಾರತ ದಿಂದ ತೊಲಗುವವರೆಗೆ ಒಕ್ಕಟ್ಟಾಗಿನಡೆಯುವದು ಅಶಕ್ಯ. ಅಸಂಭವ ವೆಂದು ಬೇರೊಬ್ಬರು ಹೇಳಬೇಕಾದುದೇ ಇಲ್ಲಾ ಅದಕ್ಕೆ ಇದೀಗ ನಡೆದಿ ರುವ ಪರಿಸ್ಥಿತಿಯು ಕೋಲಾಹಲವೆ ಸಪ್ರಮಾಣವಾಗಿದೆ. ಸಾಕು ಈ ಪಕ್ಷ ಪಾತದ ಮಾತುಗಳನ್ನು ಇಷ್ಟಕ್ಕೆ ನಿಲ್ಲಿಸಿಬಿಡಿರಿ. ಜನರು ಮುಂದಾಡದಿದ್ದರೂ ಹಿಂದಿನಿಂದ ಹಿಯ್ಯಾಳಿಸದೆ ಎಂದೂ ಬಿಡರು.

**ಭೀಷ್ಮಃ**—ದುರ್ಯೋಧನ, ಈ ಮಾತಿನಮಲ್ಲರ ಸಲ್ಲದ ನುಡಿಗಳಿಗೆ ಕಿವಿಗೊಟ್ಟು ಇಲ್ಲಿಲ್ಲದ ಅನಾಹುತಗಳನ್ನು ಮೈಮೇಲೆ ತಂದುಕೊಂಡು ಅನ ರ್ಥದ ರಕ್ತದಲ್ಲಿ ನೆನೆಯಬೇಡ. ಬಲಾಢ್ಯರಾದ ಭೀಮಾರ್ಜುನರ ಬಾಣಗ ಳಿಗೆ ನಿನ್ನ ನಿರಪರಾಧಿಗಳಾದ ಬಂಧುಗಳನ್ನು ಬಲಿಕೊಟ್ಟು, ಅವರ ಹೃದಯ ದಿಂದ ಹೊರಚಿಮ್ಮಿ ಹರಿಯುತ್ತಿರುವ ರಕ್ತದಲ್ಲಿ, ನಿನ್ನ ಜೀವನದ ನೌಕೆ ಯನ್ನು ನಡಿಸಬೇಕೆಂದು ನಿನ್ನ ಇಚ್ಛೆ ಇದ್ದರೆ ನಾವೂಸಿದ್ಧರೆ?

**ದುರ್ಯೋಧನಃ**—ಆಚಾರ್ಯರೆ, ಅಂತೂ ದೋಷವೆಂಬ ಶಬ್ದವು ಕೌರವರ ವಿನಃ ಬೇರೆಯವರಿಗೆ ಗೊತ್ತಿಲ್ಲಾ. ಯಾಕಂದರೆ ಕೌರವರು ಪಾಪಿ ಗಳು, ವಂಚಕರು, ದ್ರೋಹಿಗಳು, ವಿಶ್ವಾಸಘಾತಕರು ಇನ್ನುಳಿದ ಪಾಂಡ ವರು ಮಾತ್ರ ಪುಣ್ಯಶಾಲಿಗಳು, ಸತ್ಯಾತ್ಮಕರು, ಆಚಾರ್ಯರಿಬ್ಬರಿಗೂ ಹಿತ ಚಿಂತಕರು, ಮೇಲಾಗಿ ಏನೊಂದನ್ನೂ ತಿಳಿಯದ ಸಾಧುಗಳು, ಅಲ್ಲವೆ. (ಕೆರಳಿ) ಆಚಾರ್ಯರೆ ಇಂತಹ ಪಕ್ಷಪಾತದ ಮಾತುಗಳಿಗೆ ಹೆದರಿ ಹಿಮ್ಮೆಟ್ಟುವವರು ನಾವಲ್ಲ. ಕೌರವರಕುಲವು ಹೇಳಹೆಸರಿಲ್ಲದೆ ನಿರ್ನಾಮವಾಗಿ ಹೋದರೂ

ಚಿಂತೆಯಿಲ್ಲಾ, ಆದರೆ ಪಾಂಡವರಿಗೆ ರಾಜ್ಯಕೊಡುವದು ಕಾಲತ್ರಯದಲ್ಲಿಯೂ ಶಕ್ಯವಿಲ್ಲಾ. ಏನೋ ಹೇಳುತ್ತಿರುವರು, ಕೌರವರು ಹಟವಾದಿಗಳು, ಹುಂಬರು. ಅವರಿಗೇನು ತಿಳಿಯುತ್ತದೆ ದುರಾಗ್ರಹಿಗಳಿಗೆಂದು ತಿಳಿದಿದರೆ. ಇದು ನಿಮ್ಮ ಕೇವಲ ಹೇಡಿತನದ ಪಕ್ಷಪಾತ

ಭೀಷ್ಮಃ— ದುರ್ಯೋಧನಾ ಇದು ಪಕ್ಷಪಾತವಲ್ಲಾ. ದುಸ್ಸಾಧ್ಯವಾದ ನಿಮ್ಮ ದುರಾಭಿಮಾನ.

ಕರ್ಣಃ—ಕೇಳಿರಿ ಅನುಭವಶಾಲಿಗಳಾದ ಹಿರಿಯರ ಮಾತನ್ನು. ಆಚಾರ್ಯರೆ, ಕುರುವಂಶವನ್ನು ನಾಶಮಾಡಿ ಏಕಚಕ್ರಾಧಿಪತ್ಯವನ್ನು ಪಡೆಯಬೇಕೆಂಬ ಮಮತೆಯ ಮಹತ್ವಾಕಾಂಕ್ಷೆಯನ್ನು ಈಡೇರಿಸಿಕೊಳ್ಳಬೇಕೆಂಬ ಕಪಟಪಾಂಡವರಿಗೆ ರಾಜ್ಯಕೊಡಬೇಕೆಂಬ ನಿಮ್ಮ ಮನದಾಶೆ. ವಿಷಹೃದಯಿಗಳ ದುರಾಶೆ.

ಭೀಷ್ಮಃ—( ಸಂತಾಪದಿಂದ )ಎಲೋ, ಅಖಿಲ ಜಗತ್ತಿಗೊಡೆಯನಾದ ಕೃಷ್ಣನ ಪ್ರಾಣಸಖ ಪಾರ್ಥನ ಪಾಶುಪತಾಸ್ತ್ರಕ್ಕೆ ಕಾದಿಟ್ಟ ಕೋಡಗಾ ! ಯಾವನ ಹೆಸರನ್ನು ಕೇಳುತ್ತಲೆ ದಿಕ್ಪಾಲಕರೆಲ್ಲರೂ ದಿಗ್ಭ್ರಮಣಗೊಳ್ಳುತ್ತಿರುವರೋ ಅಂತಹ ಕುರುಪಿತಾಮಹ ಭೀಷ್ಮನಿಗೆ ವಿಷಹೃದಯಿಗಳೆಂದು ಬೊಗಳಿದ ಸೂತಕುಲಾಧಮ, ಇನ್ನೊಮ್ಮೆ ಹಾಗೆ ಬೊಗಳಿದರೆ ಭೂಮಿಯಲ್ಲಿ ನಿನ್ನದೇಹವನ್ನು ಹುಡುಕಬೇಕಾಗುವದು

ಕರ್ಣಃ— ಕೋಪದಿಂದ) ಸಾಕು. ಸಾಕುಮಾಡಿರಿ ನಿಮ್ಮ ಅರಣ್ಯ ಪಾಂಡಿತ್ಯದ ಪ್ರದರ್ಶನವನ್ನು. ಮಿತ್ರಾ ದುರ್ಯೋಧನ, ದೈವವಾದಿಗಳಾದ ಈ ಭೀಷ್ಮರ ಹುರುಳಿಲ್ಲದ ಹುಳುಕುಮಾತಿಗೆ ಸೊಪ್ಪುಹಾಕಬೇಡ ನಿನ್ನ ಉಪ್ಪುತಿಂದು ಬೆಳೆದ ಈ ದೇಹದಲ್ಲಿ ಒಂದು ಹನಿ ರಕ್ತವಿರುವವರೆಗೆ ಹೇಡಿ ಅರ್ಜುನನಮಾತು ಒತ್ತಟ್ಟಿಗಿರಲಿ. ಪಾಂಡವರನ್ನು ತನ್ನ ಹೃದಯದಲ್ಲಿಟ್ಟುಕೊಂಡು ಸಲಹುವ ಆ ಚಕ್ರಪಾಣಿ ಕೃಷ್ಣನು ಬಂದರೂ, ಮುಂದಿಟ್ಟ ಹೆಜ್ಜೆಯನ್ನು ಹಿಂದಿಡದೆ ಕಾದಿ, ನಿನ್ನ ಕೊರಳಲ್ಲಿ ವಿಜಯಮಾಲೆಯನ್ನು ಹಾಕದೆ ಬಿಡುವದಿಲ್ಲಾ

ಃ— ಎಲೋ ಪಶು, ಮುಗಿಯಿತೇನೋ ನಿನ್ನ ಸೂತಕುಲದ ಕ್ಷತ್ರಿಯ ಪುರಾಣಾ. ಕ್ಷೋತ್ರಿಯೆ, ಅರ್ಜುನನ್ನು ಸೋಲಿಸುವದು ಬ್ರಹ್ಮಾಂಡ

ದೊಡೆಯನಾದ ಪಾಂಡವರ ಪಂಚಪ್ರಾಣನಾದ, ಕೃಷ್ಣನಲ್ಲಿಯೇ ಇಲ್ಲವೆಂದ ಮೇಲೆ ನಿನ್ನಂತಹ ಬಾಯಬಡಕ ಕುನ್ನಿಯನ್ನಾರು ಕೇಳಬೇಕು

**ಕರ್ಣ:**—ಹೆಚ್ಚಿನ ಶಬ್ದಗಳು ಹೊರಡುವದಾದರೆ ಮುಂದಾಗುವ ಅನರ್ಥಕ್ಕೆ ನನ್ನನ್ನು ನಿಂದಿಸಬೇಡಿ. ಹಿರಿಯರೆಂದು ಹಿಂದೆಗೆದರೆ ಮೂರ್ಖರಂತೆ ಮುಂದರಿದು ಮಾತಾಡುವ ನಿಮಗೆ ಹಿಂದಿನ ಗೌರವದ ಸ್ಮರಣೆ ಎಲ್ಲಿಂದಾಗ ಬೇಕು ಅನ್ನದಾತೃವಿನ ಅಹಿತಚಿಂತನೆಮಾಡುವ ಕುಹಕ, ಕುಬುದ್ಧಿಯ, ಕುಲಹೀನರನ್ನು ಸೂರ್ಯಪುತ್ರನಾದ ಈ ಕರ್ಣನು ಕಸಕ್ಕಿಂತಲೂ ಕಡೆಯಂದು ಬಗೆಯುವನು.

**ದ್ರೋಣ:**— ಸುಯೋಧನ, ಪಿತಾಮಹರ ಸೂಜ್ಞೆಯು ಕುರುಕುಲಕ್ಕೆ ತಿಲಕಪ್ರಾಯವಾಗಿರುವದು. ವಿಚಾರಮಾಡು. ಸುಖದುಃಖಗಳು, ರಾಜ್ಯ ಭೋಗಗಳು, ಅಸ್ಥಿರವಾದವುಗಳು ಇಂತಹದನ್ನು ಸ್ಥಿರವೆಂದು ತಿಳಿದು ಮಿತವಿಲ್ಲದೆ ವರ್ತಿಸುವದಾದರೆ, ಮತಿಗೇಡಿಯಾದ ನಿನಗೆ ಹಿತವೆಂದೂ ಆಗದು.

**ದುರ್ಯೋಧನ:**— ಆಚಾರ್ಯರೆ ಇಲ್ಲೇತಪ್ಪುವದು ದಾರಿಯನ್ನು ತಪ್ಪಿದದಾರಿಯು ಮುಪ್ಪಿನವರಾದ ನಿಮಗೆ ಎಷ್ಟು ಹೇಳಿದರೂ ಸಿಗುವದೇ ಇಲ್ಲಾ ಅದಕ್ಕೆ ನಿಮ್ಮಅಲಕ್ಷವೇ ನಿದರ್ಶನ ಕರ್ಣನು ಸೂತಕುಲದವನೇ ಆಗಲಿ, ಯಾರೇ ಆಗಲಿ,ಮತ್ತಾವ ಇದಕ್ಕಿಂತ ಕೆಳಗಿನ ತರಗತಿಯ ಕುಲದವನಾಗಲಿ, ಕುಲಕ್ಕೂ, ಗೌರವಕ್ಕೂ ಸಂಬಂಧವೇ ಇಲ್ಲಾ. ಅದರಂತೆ ಗೌರವಕ್ಕೂ, ಪರಾಕ್ರಮಕ್ಕೂ ಏನೂ ಸಂಬಂಧವಿಲ್ಲಾ.

**ಕರ್ಣ:**— ಸಾಕು ವೇಳೆಗಳೆಯುವ ಮಾತುಗಳನ್ನು ಬೆಳಸಬೇಡಿ ಹೊತ್ತಾದರೆ ಹಳಸಿ ಹೋಗುವುದು. ದುರ್ಯೋಧನ ಕೇಳು, ಸರ್ಪಸಮೂಹಕ್ಕೆರಗುವ ಗರುಡನಂತೆ ಪಾಂಡವರ್ವೈರ ರಕ್ತದಿಂದ ನಿನಗೆ ರಕ್ತಾಭಿಷೇಕ ಮಾಡದಿದ್ದರೆ ಕ್ಷತ್ರೀಕುಲಕಂಠೀರವ, ರಣಭಯಂಕರ, ಜಮದಗ್ನಿಪುತ್ರ ಪರಶುರಾಮನ ಶಿಷ್ಯನೇ ಅಲ್ಲಾ.

**ಭೀಷ್ಮ:**—ಶಹಬಾಶ ಒಪ್ಪಿದೆ. ಜಮದಗ್ನಿಪುತ್ರ ಪರಶುರಾಮನ ಶಿಷ್ಯ ಕರ್ಣಾ, ಹೃದಯಪೊಳ್ಳಿದ್ದರೂ ಬಾಯಿಂದ ಗಂಭೀರವಾದ ನಾಲ್ಕುಶಬ್ದಗಳನ್ನಾಡಿ ಕ್ಷಣಹೊತ್ತಾದರೂ, ಗಂಗಾಕುಮಾರನನ್ನು ದಂಗುಬಡಿಸಿದ ಒಣ

ಮಾತಿನಕರ್ಣಾ ಪ್ರಚಂಡವಾದ ಪಾರ್ಥನ ಗಾಂಡೀವಧಃನುಸ್ಸಿನ ಝೇಂಕಾರಕ್ಕೆ ಅಡವಿಯಲ್ಲಿಯ ಮೃಗಗಳು,ಸಿಂಹದಗರ್ಜನೆಯನ್ನು ಕೇಳಿ ಪ್ರಾಣಭಯದಿಂದ ಅಲ್ಲಲ್ಲಿ ಅಡಗಿಕೊಡ್ರುವಂತೆ ಶಿಬಿರದಲ್ಲಿ ಕಣ್ಮರೆಯಾದ ಕುಲಹೀನ ಕರ್ಣಾ. ಭಲೆ ಭಲೆ, ನೀನಿಷ್ಟು ಪ್ರತಾಪಶಾಲಿ ಇರುವೆಯೆಂಬುದನ್ನು ಅರಿತಿರಲಿಲ್ಲಾ, ಈಗ ಅರಿತುಕೊಂಡೆ ಎಲೋ ಕಣಕದಕರ್ಣಾ. ಅಂದು ಪಾಂಚಾಲರಾಜಸಭೆಯಲ್ಲಿ ಎಲ್ಲರಿಂದಲೂ ಅಸಾಧ್ಯವಾದ ಮತ್ಸ್ಯಯಂತ್ರವನ್ನು ಭೇದಿಸಿ, ಪಾಂಚಾಲಿಯಿಂದ ನಿಮ್ಮೆಲ್ಲರ ಸಮಕ್ಷಮ ಕೊರಳಲ್ಲಿ ಪೂಮಾಲೆಯನ್ನು ಹಾಕಿಸಿಕೊಂಡು ಅವಳ ಕೈ ಹಿಡಿದನಲ್ಲಾ, ಆಗ್ಗೆ ಈ ಉದ್ಬುದ್ಧವಾದ ಗಾಂಭೀರ್ಯ ಶಬ್ದಗಳು ಎಲ್ಲಡಗಿದ್ದವು ? ಅದೂಹಾಗಿರಲಿ; ಅಂದು ಗಂಡುಗಲಿ ಗಂಧರ್ವರಾಜನ ಕೈಯಲ್ಲಿ ಬೆಕ್ಕಿನಬಾಯಲ್ಲಿಸಿಕ್ಕ ಇಲಿಯಂತೆ ಚಟಪಟಿಸುತ್ತ ಬಾಯಿಬಿಟ್ಟು ನೀರು ನೀರೆಂದು ಕೂಗಿಕೊಂಡಾಗ, ಇದೀಗ ನೀನು ಮನಬಂದಂತೆ ಜರೆದ ಪಾರ್ಥನು ಏಕಾಂಗಿಯಾಗಿ ಹೋಗಿ ಕ್ಷಣಾರ್ಧದಲ್ಲಿ ಈ ನಿನ್ನ ರಾಜನನ್ನು ಬಂಧ ಮುಕ್ತಮಾಡಿದನಲ್ಲಾ; ಆಗ ಈ ನಿನ್ನ ಕೆಟ್ಟ ಕೂಗನ್ನು ಎಲ್ಲಿಬಿಟ್ಟಿದ್ದೆ? ಕಂಡದ್ದನ್ನು ಕಂಡಹಾಗೆ ಹೇಳುವರಲ್ಲಾ ಎಂದು ಸಿಟ್ಟಾಗಬೇಡ. ಆಗ ಸುಮ್ಮನಿರಬೇಕಾದ ಸಮರ್ಪಕ ಕಾರಣವಿದ್ದರೆ ತಿಳಿಸು! ಅದೇನು ತಪ್ಪಲ್ಲಾ. ವಿಶ್ವಾಸಘಾತುಕ ಪುಂಡರಿಗೂ ಪುಂಡನಾದ ಗಂಡುಗಲಿ ಪಾರ್ಥನನ್ನು ಜರೆಯುವದು ನಿನ್ನಯೋಗ್ಯತೆಯೆ? ಪ್ರಮಾಣಮಾಡಿ ನೀನೇ ಹೇಳು. ಅವನಿಗೆ ನೀನು ಸಾಟಿಯಾಗಬಲ್ಲೆಯಾ?ದೂರಬೇಡ ಅಕಸ್ಮಾತ್ತಾಗಿ ಈಗ ಅವನೇ ಇಲ್ಲಿದ್ದಿದ್ದರೆ ನಿನ್ನ ಪ್ರಾಣವಾಯು ಹಾರಿ ಬಹಳ ಹೊತ್ತಾಗುತ್ತಿತ್ತು. ಉನ್ಮತ್ತ ಕತ್ತೆಯಕರುವೆ, ಪಿತ್ತಾತಿರೇಕದಿಂದ ಕಂಗೆಟ್ಟು ಅರ್ಜುನನನ್ನು ಹಾಗೆಮಾಡುವೆ, ಹೀಗೆಮಾಡುವೆ, ಏನುಮಾಡುವೆಯೋ ಕುಗ್ರಾಮಾ?

**ಕರ್ಣ:**— ವೀರರಾದವರು ಮಾಡುವದನ್ನು ಹೇಳಿ ಮಾಡುವದಿಲ್ಲಾ. ಪ್ರಸಂಗದಲ್ಲಿ ತಕ್ಕ ಶಕ್ತಿಯನ್ನು ಪ್ರಯೋಗಿಸಿ ವೈರಿಗಳನ್ನು ಸದ್ದಿಲ್ಲದೆ ನಿರ್ನಾಮಮಾಡಿ ಸುಮ್ಮನೆ ಕುಳಿತು ಬಿಡುವರು. ಆದರೆ ಕೈಲಾಗದ ಬಡಬಡಿಕೆಯ ಭಂಡರು ಮಾತ್ರ ಕಂಡ ಕಂಡ ಹಾಗೆ ಕೈಸಾಗದ ನಾಲ್ಕು ಮಾತುಗಳನ್ನಾಡಿ ಹೊಲೆಯರ ಹಾಗೆ ನಾಲಿಗೆಯನ್ನು ಹೊಲಸುಮಾಡಿಕೊಂಡು ವೈರಿಯು ಬಲವಾದಕೂಡಲೇ ಬಾಯಿಮುಚ್ಚಿಕೊಂಡು ಕೂಡ್ರುವರು. ಎಲೋ

ಜರತಾ, ಸಲಿಗೆಕೊಟ್ಟಿದ್ದು ತಲೆಗೇರಿತೆಂಬಂತೆ, ಹೃದಯ ಕಲ್ಲಣವಾದ ನಿನ್ನ ಮಾತುಗಳನ್ನು ಕೇಳಿ ನನ್ನ ಕೋಪವು ಸಾಗರದಂತೆ ಮೇರೆಮೀರಿತು. ತಪ್ತವಾದ ಲಾಲಾರಸದಿಂದುದ್ಭವಿಸಿದ ಹೃದಯಜ್ವಾಲೆಯು ಮಸ್ತಕಕ್ಕೇರಿತು. ಹೇ ರಣಕೇಸರಿಯ ಖಡ್ಗವೆ, ವೈರಿಗಳ ನೆತ್ತರದಿಂದ ತೃಪ್ತವಾಗುವದಕ್ಕಾಗಿ ಹೊರಬಿದ್ದು ಮುದಿ ಭೀಷ್ಮನಿಗೆ, ಸ್ವಲ್ಪುವಟ್ಟಿಗೆ ನಿನ್ನ ಪ್ರತಾಪವನ್ನು ತೋರಿಸಿ ನಂತರ ವೈರಿಯಸೇಡು ತೀರಿಸು ( ಎಂದು ಒರೆಯಿಂದ ಕತ್ತಿಯನ್ನು ಹಿರಿದು ಎತ್ತಿ ಹಿಡಿಯುವನು )

ಭೀಷ್ಮ:—( ಕೂಡಲೆ ) ಎಲೋ ಕೇಡಿಗಾ ಇನ್ನು ನಿನ್ನನ್ನು ಜೀವದಿಂದಿಟ್ಟು ಪ್ರಯೋಜನವಿಲ್ಲಾ. ಬಾ, ಮುದಿಭೀಷ್ಮನ ಕೈಚಳಕನ್ನು ಸ್ವಲ್ಪ ನೋಡು ( ಎಂದು ಭೀಷ್ಮನೂ ಖಡ್ಗವನ್ನೇ ಹಿಡಿದು ಕರ್ಣನ ಖಡ್ಗಕ್ಕೆಹಚ್ಚಿ ನಿಲ್ಲುವನು, ಅಷ್ಟರಲ್ಲಿ )

**ದುರ್ಯೋಧನಃ**— ಹಾ ಹಾ, ಆಚಾರ್ಯರೆ ನಮ್ಮ ನಮ್ಮಲ್ಲಿ ಈ ಕದನವು ಸರಿಯಲ್ಲಾ, ಸಮಾಧಾನ ತಾಳಿರಿ. ( ಇಬ್ಬರೂ ಸರಿದುನಿಲ್ಲುವರು )

ಭೀಷ್ಮ:— ಇರ್ಲಿ ಕರ್ಣಾ, ಅರ್ಜುನನನ್ನು ಸಂಹರಿಸುವೆನೆಂದು ಹೇಳಿದೆಯಲ್ಲಾ. ಯಾವ ಅರ್ಜುನನನ್ನು ಹೇಳು? ಕೋಲ್ಮಿಂಚಿನಂತೆ ಕ್ಷಣಮಾತ್ರದಲ್ಲಿ ತ್ರಿಪುರವನ್ನು ಸುಟ್ಟು ಭಸ್ಮಮಾಡಿದನಲ್ಲಾ, ಆ ಅರ್ಜುನನನ್ನೋ ಅಥವಾ ದೇವೇಂದ್ರನ ಖಾಂಡವವನವನ್ನು ದಹಿಸಿದನಲ್ಲಾ, ಕುಂತೀಪುತ್ರ ಅರ್ಜುನನನ್ನೋ ಇಲ್ಲವೆ ಹಿರಣ್ಯಪುರದ ರಾಕ್ಷಸರನ್ನು ನಾಶಮಾಡಿದ ಪಾಂಡವಪುತ್ರ ಅರ್ಜುನನನ್ನೋ ಅಥವಾ ಮತ್ತಾವ ಕಾಯಿಪಲ್ಲೆ ಮಾರುವ ಅರ್ಜುನನನ್ನೋ? ಎಲೋ ಪಶುವೆ, ಅವನನ್ನು ಕೊಲ್ಲುವ ಶಕ್ತಿಯು ಪೂರ್ವವಾಹಿನಿಯಾಗಿರುವ ಗಂಗೆಯನ್ನು ಯಾವನು ತನ್ನ ಶರಸಂಧಾನದಿಂದ, ಪಶ್ಚಿಮವಾಹಿನಿಯನ್ನಾಗಿ ಮಾಡಿದನೋ, ಅಂಥ ಈ ಭೀಷ್ಮನಲ್ಲಿಯೇ ಇಲ್ಲವೆಂದಮೇಲೆ ನಿನ್ನಂಥ ಕ್ಷುಲ್ಲಕನಪಾಡೇನು. ಮೇಲಾಗಿ ಅರ್ಜುನನು ಏಕಾಂಗಿಯಾಗಿ ಬಂದಿರುವನೆಂದೂಹಿಸಿ ಹೀಗೆ ಮಾತನಾಡುವೆಯೋ! ಹಾಗೆಂದಿಗೂ ತಿಳಿಯಬೇಡ ಅರ್ಜುನನು ಏಕಾಂಗಿಯಾಗಿ ಬಂದಿಲ್ಲಾ ಬರುವದಕ್ಕೆ ಅವಕಾಶವೂ ಇಲ್ಲಾ. ಅವನ ಹಿಂದೆ ಈ ನಿನ್ನ ಹನ್ನೊಂದಕ್ಷೋಹಿಣಿ

ಸೈನ್ಯವನ್ನೂ ಈ ನಿನ್ನ ಸಮ್ರಾಟನನನ್ನೂ ಹುಳದಂತಿರುವ ನಿನ್ನನ್ನೂ ಸಮಸ್ತ ಜಗತ್ತನ್ನೂ ಏಕಕಾಲಕ್ಕೆ ನುಂಗಿ ನೀರು ಕುಡಿಯುವ, ಭೂಕಂಪ ದಂಥ ಭೀಕರ ಮಹಾತ್ಮಾ ಶ್ರೀಕೃಷ್ಣನ ಸುದರ್ಶನ ಚಕ್ರವು ಮಾಯದಿಂದ ಅವನ ಹಿಂದೆ ತಿರುಗುತ್ತಿರುವದೆಂಬುದು, ಅಹಂಕಾರದಿಂದ ಅಂಧನಾಗಿರುವ ನಿನಗೆ ಹೇಗೆ ಕಾಣಬೇಕು! ನಿನ್ನಂಥ ಹುಲ್ಲುಜೀವಿಯನ್ನು ಕೊಲ್ಲುವದಕ್ಕೆ ಅರ್ಜುನನಿಗೆ ಶಸ್ತ್ರಾಸ್ತ್ರಗಳ ಆವಶ್ಯಕತೆಯೇ ಇಲ್ಲಾ. ಕೇವಲ ತನ್ನ ಎಡ ಗಾಲಿನ ಹೆಬ್ಬೆರಳಿನಿಂದ ತಿಕ್ಕಿಬಿಡುವನು.

**ಕರ್ಣ:** – ಎಲೋ ಮುದಿಗೂಬೆ, ಜಗತ್‌ಪ್ರಕಾಶ ಸೂರ್ಯಪುತ್ರ ಕರ್ಣನ ಯೋಗ್ಯತೆಯು ನಿನಂಥ ಕೈಲಾಗದ ಹೊಗಳುಭಟನಿಗೆ ಹೇಗೆ ತಿಳಿಯಬೇಕು. ಈಗ ಉಸಿರುಗಟ್ಟುವವರೆಗೂ ವರ್ಣನೆಮಾಡಿ ಹೇಳಿದೆ ಯಲ್ಲಾ. ಪರಮಾತ್ಮನೊ ಪಾಪಿಷ್ಟನೋ ಎಂದು ಅವನನ್ನು ಅವನ ಜೊತೆ ಯಲ್ಲಿ ಇಂಥ ಸಾವಿರಾರು ನಿರ್ಜೀವಿ ಸುದರ್ಶನಗಳನ್ನು ಕಡೆಗೆ ಸುದರ್ಶನ ದೊಡೆಯನಾದ ಆ ಕಳ್ಳನನ್ನು ಇಂಥ ಕಪಟಿಗಳನ್ನು ಮಾತಿನಿಂದಲೇ ಮರುಳುಮಾಡುತ್ತಾ ಬಿಸಿಅನ್ನದಾಸೆಗಾಗಿ ಬಿದ್ದಿರುವ ನಿನ್ನನ್ನು ಪಾಶು ಪತಾಸ್ತ್ರದ ಜಂಭಕೊಚ್ಚಿಕೊಳ್ಳುವ ಆ ಕುಲಗೇಡಿ ಕಲಿಪಾರ್ಥನನ್ನು ಕ್ಷಣಮಾತ್ರದಲ್ಲಿ ಕತ್ತರಿಸಿ ರಣಮಂಡಲದಲ್ಲಿ ಮಾರ್ತಾಂಡನಂತೆ ಪ್ರತಿಭಟ ಸುತ್ತಾ ಪ್ರಚಂಡವಾದ ಹಾಹಾಕಾರವನ್ನೆಬ್ಬಿಸಿಬಿಡುವೆ (ಎಂದು ಮೀಸೆಯನ್ನು ತಿರುವುತ್ತ ಹೋಗುವನು )

**ದುರ್ಯೋಧನ:**— ಆಚಾರ್ಯರೆ ನೀವು ಬೇಗ ಬನ್ನಿರಿ. (ಪ್ರ) ದುರ್ಯೋಧನ ಬಂದೆ ತಡೆ(ಎಂದು ದುರ್ಯೋಧನನನ್ನೇ ಹಿಂಬಾಲಿಸುವನು·)

( ರಸ್ತಾಪರದೆಯು ಬೀಳುವದು. )

ಪಾಂಚಾಲಿಯು ಪ್ರವೇಶಿಸುವಳು.

## ೪ನೇ ಪ್ರವೇಶ

**ಪಾಂಚಾಲಿ:**—( ಕೈಮುಗಿದು ) ಓ ಕೃಷ್ಣಾ, ನೀನು ಭಕ್ತರಿಗೆ ಅಭಯ ವನ್ನು ಕೊಡತಕ್ಕವನು. ಸಂಸಾರವೆಂಬ ಕಿಚ್ಚಿನಲ್ಲಿಬಿದ್ದು ದಗ್ಧವಾಗುವವರ ತಾಪವನ್ನು ನೀಗಿಸಿ, ಅವರಿಗೆ ಶಾಶ್ವತ ಸುಖರೂಪವಾದ, ಮೋಕ್ಷವನ್ನು

ಕೊಡತಕ್ಕವನು, ದೇವ ನೀನೇ ಆದಿಪುರುಷನು ಸಕಲ ಜಗತ್ತಿಗೂ ಕಾರಣೀಭೂತನು, ಸರ್ವೇಶ್ವರನು ಸರ್ವಾಂತರಾತ್ಮನು, ಸರ್ವನಿಯಾಮಕನು, ಸಕಲರಹೃದಯದಲ್ಲಿಯೂ ವ್ಯಾಪಿಸಿಕೊಂಡು ಅವರವರ ಕರ್ಮಾನುಸಾರವಾಗಿ ಸಮಸ್ತ ಪ್ರಪಂಚದ ಒಳಗೂ ಹೊರಗೂ ನೀನೇನೀನಾಗಿ ಅವರವರ ಪಾಪಕರ್ಮಗಳಿಗೆ ತಕ್ಕ ಪ್ರಾಯಶ್ಚಿತ್ತವನ್ನು ಅರಿಯದವನಂತೆ ಕೊಡಿಸುತ್ತಾ ಮಾನವರ ಮನಸಿನೊಳಗಿನ ಮಾಲಿನ್ಯತೆಯನ್ನು ಹೋಗಲಾಡಿಸುತ್ತಾ ನಿಜ ಜ್ಞಾನಶಕ್ತಿಯಿಂದಲೇ ಮಾಯಾ ಧರ್ಮಗಳನ್ನು ನಿರಸನಮಾಡಿ, ಅದರ ಸಂಬಂಧವಿಲ್ಲದಹಾಗೆ ಮಾಡಿಕೊಳ್ಳಬಲ್ಲ ಮಹಾಮಹಿಮನು. ಬೇರೆ ಯಾವ ಆಧಾರವನ್ನು ಅಪೇಕ್ಷಿಸಿದವನು. ಇಂಥ ಸರ್ವೇಶ್ವರನಾದ ನೀನು ದೇಹಾತ್ಮ ಭ್ರಮೆರರೂಪವಾದ ಮಾಯೆಯಿಂದ ಮೋಹಿತನಾದ ಜೀವನಿಗೆ ಅವರವರ ಕರ್ಮಾನುಸಾರವಾಗಿ, ಸುಖದುಃಖಗಳನ್ನು ಕೈಗೂಡಿಸತಕ್ಕವನು. ಕೃಷ್ಣಾ ಈ ಪರಸ್ವರೂಪ ವಿಚಾರವು ಹಾಗಿರಲಿ ನೀನು ಅವತಾರವೆತ್ತಿರುವದು ಕೂಡಾ ಭೂಭಾರರಾದ ದುಷ್ಟರನ್ನು ನಿಗ್ರಹಿಸಿ, ಅನನ್ಯ ಪ್ರಯೋಜನವಾಗಿ ಭಕ್ತಿಯೊಂದರಲ್ಲಿಯೇ ನಿರತರಾದ ಭಕ್ತರ ಯೋಗಕ್ಷೇಮವನ್ನು ಮೇಲಿಂದ ಮೇಲೆ ವಿಚಾರಿಸುವದಕ್ಕಾಗಿ ಅಲ್ಲವೆ ಈಗ ನಿನ್ನ ಸಖನು ಏನೊಂದೂ ಅರಿಯದ ಪಶುವಿನೊಡನೆ ಯುದ್ಧಕ್ಕೆ ಹೋಗಿರುವನು ಮೇಲಾಗಿ ಆಯುಧಗಳಾದರೋ ಅವಧಿ ಮುಗಿಯದೆ ಸಿಗುವಹಾಗಿಲ್ಲಾ. ಸಿಕ್ಕರೂ ಧರಿಸುವ ಹಾಗಿಲ್ಲ, ಇಂಥ ನಿರಾಯುಧನಾದ ನಿನ್ನ ಮಿತ್ರನಿಗೆ ಸಹಾಯಕನಾಗಿ ಕಾಪಾಡಿಕೊಂಡುಬರುವ ಭಾರವು ನಿನ್ನದಲ್ಲವೆ !

ಆದಿ ತಾಳ, ಪದ ರಾಗ ಮಿಶ್ರ ತಿಲಕ್ ಕಾಂಬೋದ

ಕಾಯೋನಿ । ಕರುಣಾಮೂರುತಿ । ನೀನತಿ ಹಿತಮತಿ ।
ದ್ಯುತಿಪತಿ । ಅಡಿದಾವರೆಗಳನಾ । ಬಿಡದಲೆ ಸೇವಿಸೆನಾ । ಪೊರೆವುದು
ಆನಂದದಿ ।

ಪದವನ್ನು ಅನ್ನುತ್ತಾ ಹೋಗುವಳು.

(ಆದೇ ರಸ್ತಾಪರದೆಯ ಮುಂದೆ ಭೀಷ್ಮನು ಪ್ರವೇಶಿಸಿ)

**ಭೀಷ್ಮ**–:ಮಾನವನಿಗೆ ಗ್ರಹಚಾರವು ಪ್ರಭಲವಾದಾಗ,ಹಿತರು ಕೂಡಾ ಅಹಿತರಾಗಿ ತೋರುವಂತೆ, ದುರ್ಯೋಧನನಿಗೆ ಮಾಡಿದ ಉಪದೇಶವೆಲ್ಲವು

ವಿಷಮಯವಾಗಿ ಪರಿಣಮಿಸಿತು. ಆದರೆ ನಾನೀಗ ಯೋಚಿಸುವದು ನನಗಾಗಿ ಅಲ್ಲಾ ಅಥವಾ ಯುದ್ಧದ ಸಲುವಾಗಿಯೂ ಅಲ್ಲಾ. ಯಾವತ್ತೂ ಮೂವತ್ಮೂರುಕೋಟಿ ದೇವತೆಗಳು ಈ ಭೀಷ್ಮನ ಮೇಲೆ ಏಕಕಾಲಕ್ಕೆ ಸಾಗಿ ಬಂದರೂ ಸೊಪ್ಪು ಹಾಕಲಾರಿ. ಆದರೆ ಪರಾಕ್ರಮಶಾಲಿಗಳೂ, ಜಗದೇಕ ವೀರರೂ, ಜಗದ್ವಂದ್ಯರೂ, ಸುಂದರರೂ, ಗುರುಭಕ್ತಿಯುತರೂ, ಕರುಣಾಕರರೂ ಆದ ಪರಮಪೂಜ್ಯ ಕುಂತಿಯ ಪುತ್ರರನ್ನು ಇದೇ ಈ ನನ್ನ ತೋಳತೊಟ್ಟಿಲದಲ್ಲಿಟ್ಟು, ಎತ್ತಿ ಆಡಿಸಿದೆನೋ ಅಂಥ ನನ್ನ ಮಕ್ಕಳ ಕುತ್ತಿಗೆಯನ್ನು ಇದೇ ಕೈಗಳಿಂದಲೇ ಕತ್ತರಿಸುವ ಪ್ರಸಂಗ ಬಂದೊದಗಿತಲ್ಲಾ! (ದುಃಖದಿಂದ ಅಕ್ಷರಗಳನ್ನು ಒಂದೊಂದೇ ಹೊರಡಿಸುತ್ತಾ )ನನ್ನನ್ನೇ ಹಿರಿಯರೆಂದು ನಂಬಿದ ಪಾಂಡುರಾಜನು ಪ್ರಾಣೋತ್ಕ್ರಮಣ ಸಮಯದಲ್ಲಿ ನನ್ನನ್ನು ಕರೆಯಿಸಿ ( ಗದ್‌ಗದಸ್ವರದಿಂದ ) ಗುರುವರಾ ನನ್ನ ಈ ಐದು ರತ್ನಗಳನ್ನು ನಿನ್ನ ಉಡಿಯಲ್ಲಿ ಹಾಕುವೆ ಇನ್ನೂ ಚಿಕ್ಕವರು ಧರ್ಮನು ಸಾತ್ವಿಕನು. ಭೀಮನು ತುಂಟನು. ಅರ್ಜುನನು ಕುಶಲಮತಿಯು. ನಕುಲ ಸಹದೇವರು ಏನೊಂದೂ ತಿಳಿಯದ ಹಸುಳೆಗಳು. ಬಾಲಬುದ್ಧಿಗನುಸರಿಸಿ ಏನಾದರೊಂದಪರಾಧವನ್ನು ಮಾಡಿದರೆ, ನನ್ನ ಹೊಟ್ಟೆಯ ಮಕ್ಕಳೆಂದು ಕ್ಷಮಿಸಿ, ನನ್ನ ವಂಶೋದ್ಧಾರ ಮಾಡೆಂದು ಅತಿ ದೈನ್ಯದಿಂದ ನನ್ನನ್ನೇ ದಿಟ್ಟಿಸಿ ನೋಡುತ್ತಿದ್ದಾಗ್ಗೆ (ತನಗೇಯೆಂದು ನಟಿಸುತ್ತಾ) ಎಲೋ ಸ್ವಜನ ದ್ರೋಹಿ ಭೀಷ್ಮಾ, ಆಗ ನಿನ್ನ ಬಾಯಿಂದ ಏನು ಏನು ಬೊಗಳಿದೆ. ನನ್ನ ಮಕ್ಕಳ ರಕ್ಷಣೆಯಭಾರವು ನನಗಿಲ್ಲವೆ? ಭೀಷ್ಮನು ಅಷ್ಟು ಅಜ್ಞಾನಿಯೇ ಎಂದು ಕೈಯಲ್ಲಿ ಕೈಕೊಟ್ಟು ನೀನು ನಿಶ್ಚಿಂತೆಯಿಂದ ಪ್ರಾಣವನ್ನು ತ್ಯಜಿಸುವದಕ್ಕೆ ವಚನಕೊಟ್ಟೆಯಲ್ಲವೆ! ನಿರ್ದಯಾ ಭೀಷ್ಮಾ, ಈಗ ಅವನ ವಂಶೋದ್ಧಾರದ ಬದಲು ! ಅವನ ವಂಶ ವೃಕ್ಷವನ್ನೇ ಛೇದಿಸುವ ದುರ್ಧರ ಪ್ರಸಂಗವನ್ನು ತಂದುಕೊಂಡೆಯಲ್ಲಾ, ಮಕ್ಕಳಿಗೆ ಹಾಲು ಕುಡಿಸುತ್ತೇನೆಂದು ಎತ್ತಿಕೊಂಡು ಕನಿಕರವಿಲ್ಲದ ಕಟುಕನಂತೆ ನಾನೇ ಕೊಲ್ಲಬೇಕಾಯಿತಲ್ಲಾ. ಕುಮಾರಾ, ಪಾಂಡವ ವಂಶೋದ್ಧಾರಕ ಜಗದಂತರ್ಯಾಮಿಯಾದ ಕೃಷ್ಣ ಪರಮಾತ್ಮನ ಪ್ರಾಣಸಖಾ, ನಿನ್ನ ಮೇಲೆ ಹೇಗೆ ಕೈಮಾಡಲಿ, ಮಕ್ಕಳಮೇಲೆ ಕೈಮಾಡುವ ಪಾಪಿ ಭೀಷ್ಮನ ಕರಗಳು ಕಳಚಿ ಬೀಳಬಾರದೆ? ಇದು ವರೆಗೂ

ಆ ಪುಣ್ಯಾತ್ಮರನ್ನು ಪುತ್ರರಂತೆ ನೋಡಿ, ಈಗ ಶತ್ರುಗಳಂತೆ ಕಾಣುವ ಪಾಪಿ ಕಣ್ಣುಗಳೇ ಹಣ್ಣಿನಂತೆ ಕಳಚಿ ಬೀಳಬಾರದೆ? ದುರ್ದೈವಿ ಭೀಷ್ಮಾ, ತುತ್ತು ಅನ್ನಕ್ಕಾಗಿ ನಿನ್ನ ತೂಕವನ್ನೇ ಕಡಿಮೆಮಾಡಿಕೊಂಡೆಯಲ್ಲಾ. ಭೀಷ್ಮಾ ತಂದೆಯ ವಚನವನ್ನು ಪಾಲಿಸುವದಕ್ಕಾಗಿ, ಆಜನ್ಮ ಬ್ರಹ್ಮಚಾರಿಯಾದೆ. ಪಾಂಡುಭೂಪಾಲನ ವಚನವನ್ನು ಪಾಲಿಸುವದಕ್ಕಾಗಿ ಆ ಚಂದ್ರಾರ್ಕ ನರಕ ಭಾಗಿಯಾಗುವೆಯಾ! ಆಗು ಆಗು ನಿನ್ನ ಪಾಪದ ಫಲವನ್ನು ಅನುಭವಿಸು

( ಎಂದು ಹೋಗುವನು. )

## ೫ನೇ ಪ್ರವೇಶ

( ಜಂಗಲ್‌ಸೀನು ಶಮೀವೃಕ್ಷದ ಬಳಿಯಲ್ಲಿ ಅರ್ಜುನ ಉತ್ತರ ನಿಂತಿರುವದೃಶ್ಯ )

**ಅರ್ಜುನಃ**— ಉತ್ತರಾ ನೀನು ಸ್ವಲ್ಪ ಮರೆಯಾಗು ಇಲ್ಲಿ ಈ ಗಿಡದಲ್ಲಿ ಭೂತವಿದೆ ನಾನು ಓಡಿಸುತ್ತೇನೆ.

**ಉತ್ತರಃ**— ಅಪ್ಪುಮಾಡು ಮಹಾರಾಯಳೆ. (ಎಂದು ಮರೆಯಾಗುವನು, ಅರ್ಜುನನು ಕೈಮುಗಿದು ನಿಂತು)

**ಅರ್ಜುನಃ**— ಜಗತ್ಪಾವನಳಾದ ಕಾಳಿಕಾಂಬೆ, ಪಾಂಡವರ ಮಾತಿನಂತೆ ಶಸ್ತ್ರಾಸ್ತ್ರಗಳನ್ನು ನಿನ್ನ ಹೃದಯದಲ್ಲಿಟ್ಟುಕೊಂಡು ಮಕ್ಕಳಂತೆ ಕಾಪಾಡಿದೆ. ಈಗ ಆಯುಧಸಮೇತರಾಗಿ ಪ್ರಕಟವಾಗುವ ಶುಭಸಮಯ ಒದಗಿರುವದರಿಂದ ನಮ್ಮ ಶಸ್ತ್ರಾಸ್ತ್ರಗಳನ್ನು ನಮಗೆ ದಯಪಾಲಿಸಿ ಕೌರವರೊಡನೆ ಕಾದಿ ಜಯಶಾಲಿಗಳಾಗುವಂತೆ ಅನುಗ್ರಹಿಸಬೇಕೆಂದು ಪಾರ್ಥನ ಬೇಡಿಕೆ! ದೇವಿ ನಮ್ಮ ಆಯುಧಗಳನ್ನು ದಯಪಾಲಿಸಿದ ಆಶ್ವೀಜಶುದ್ಧ ದಶಮಿಯು. ಮುಂದಿನ್ನು ಭಾರತೀಯರಿಂದ ವಿಜಯದಶಮಿ ಎಂಬ ಪವಿತ್ರನಾಮವನ್ನು ಹೊಂದಲಿ ಆ ದಿವಸ ಸರ್ವ ಭಾರತೀಯರೆಲ್ಲರು ನಿನ್ನನ್ನು ಬಹುಭಕ್ತಿಯಿಂದ ಪೂಜಿಸಲಿ.

**ತಾಳ, ರೂಪ** ಪದ ರಾಗ, ವಿಮನ

ಪಾವನ ಮಧುರಾನಿಲಯೇ। ಪಾಂಡುರಾಜತನಯೇ ಅಂಬಾ। ಭವರಾಗ ತಾಳಾರ್ಜಿತ। ಪರಿತೋಷಿತ ಹೃದಯೇಶ್ವರಿ। ಭಾವಕ ವರಪ್ರದಾಯನಿ। ಭಕ್ತಮೋದ ಸಮುದಾಯಿನಿ। ಪಾಪಕರ್ಮವಿಮೋಚನಿ। ಶ್ರೀಕದಂಬ ವನವಾಸಿನಿ। ದೇವಿ ಮೀನಾಕ್ಷಿ ಮುದಂ। ದೇಹಿಮೆ ಸತತಂ ಅಂಬಾ।

( ಎಲೋ ಉತ್ತರ ಹೀಗೆಬಾ, ಆ ಗಿಡದಲ್ಲಿ ಪಾಂಡವರು ಆಯುಧಗಳನ್ನಿಟ್ಟಿರುವರು ತೆಗೆದುಕೊಂಡುಬಾ. )

**ಉತ್ತರ:**—ಬ್ರಹನ್ನಳೀ ಇಂತಹ ಕೆಲಸಗಳೇನಿದ್ದರೂ ಹೇಳು. (ಹೋಗಿ ಗಿಡವನ್ನು ಹತ್ತಿ ಆಯುಧದಗಂಟಿಗೆ ಕೈಹಾಕುವನು. ಕೈಹಿಡಿದಂತೆ ನಟಿಸಿ ಅಯ್ಯೋ ಅಪ್ಪಾ ಭೂತಯೆಂದು ಗಟ್ಟಿಯಾಗಿ ಒದರುತ್ತಾ,ಅಮ್ಮಾ ಬ್ರಹನ್ನಳೆ ಎಂದು ಶಂಖವಾದ್ಯಮಾಡುವನು.)

**ಅರ್ಜುನ:**— ಉತ್ತರಾ ಹೆದರಬೇಡ, ಅರ್ಜುನನ ಹೆಸರುಹೇಳು.

**ಉತ್ತರ:**— ಅರ್ಜುನನ ಹೆಸರುಹೇಳು, ಬ್ರಹನ್ನಳೆ ಬಿಡಲಿಲ್ಲಾ.

**ಅರ್ಜುನ:**— ಎಲೋ ಹಾಗಲ್ಲಾ, ದೇವಿ ಅರ್ಜುನನು ಹೇಳಿದ್ದಾನೆ ದಯಪಾಲಿಸು ಅನ್ನು.

**ಉತ್ತರ:**— ತಾಯಿ ಅರ್ಜುನನು ಹೇಳಿದ್ದಾನೆ ದಯಪಾಲಿಸು. (ಆಯುಧಗಳು ಬರುವವು ಗಂಟನ್ನು ತೆಗೆದುಕೊಂಡು ಇಳಿಯುವನು, ಬಿಚ್ಚಿನೋಡಿ) ಬ್ರಹನ್ನಳೆ ಮೇಲೆ ನೋಡಿದರೆ ಹೆಣದಾಕಾರವಿತ್ತು ಒಳಗೆ ನೋಡಿದರೆ ಚಿತ್ರವಿಚಿತ್ರವಾದ ವಸ್ತುಗಳು. (ಒಂದನ್ನು ಎತ್ತಿನೋಡಿ) ಅಬ್ಬಾ ನನ್ನಂತಹ ಗಂಡಗಲಿ ಗಂಡಸು ಎರಡೂ ಕೈಯಿಂದ ಎತ್ತಿದರೆ ಸೆಲವನ್ನು ಬಿಟ್ಟು ಒಂದು ಗೇಣುಸಹಿತ ಏಳುವದಿಲ್ಲಾ, ಅಂದಮೇಲೆ ಇವುಗಳನ್ನು ಒಂದೇ ಕೈಯಿಂದ ಎತ್ತಿ ಯುದ್ಧಮಾಡುವ ಪುಣ್ಯಾತ್ಮರಾರಪ್ಪಾ ಅವರು!

**ಅರ್ಜುನ:**— ಆಗಲೇ ನೀನು ಹೀಯ್ಯಾಳಿಸಿದೆಯಲ್ಲಾ, ಅವರು.

**ಉತ್ತರ:**— ಅಂದರೆ.

**ಅರ್ಜುನ:**— ಪಾಂಡವರು.

**ಉತ್ತರ:**— ಬ್ರಹನ್ನಳೆ ಇದೊಂದು ನನ್ನಿಂದ ಬಹಳ ತಪ್ಪಾಯಿತು. ಯಾಕಂದರೆ ಆಕಸ್ಮಾತ ಅವರು ಬಂದು ಬೈದವರು ಇಂಥವರೇ ಎಂದು ಗೊತ್ತಾದರೆ ಆಮೇಲೆ ನಮ್ಮ ಪಂಚಪಕ್ವಾನ್ನ ಚಿತ್ರಾನ್ನಾದೀತು.

**ಅರ್ಜುನ:**— ಉತ್ತರ ಬಾ, ರಥದ ಮೇಲೆ ಸ್ವಲ್ಪ ಕೂಡ್ರು.

**ಉತ್ತರ:**— ಏಕೆ ?

**ಅರ್ಜುನ:**—ಸ್ವಲ್ಪ ಆ ಕಡೆಗೆಹೋಗಿ ಬರುತೇನೆ. (ಮೂತ್ರಕೆಂದು ಸನ್ನೆಯಿಂದ ಹೇಳುವನು.)

**ಉತ್ತರಃ**— ಹಾಂ ತಿಳಿಯಿತು, ಹೋಗಿಬಾ. (ಎಂದು ರಥದ ಮೇಲೆ ಹತ್ತಿಸಿಲ್ಲುವನು ಇಷ್ಟರಲ್ಲಿ ವೈರಿಗಳು ಬಂದಂತೆ ಒಳಗಿಂದ ಗದ್ದಲವಾಗುವದು.) ಅಯ್ಯೋ ಬ್ರಹನ್ನಳೇ ವೈರಿಗಳು ತೀರ, ಅಂದರೆ ಹತ್ತಿರಕ್ಕೆ ಬಂದರು. (ಹೆದರಿ ನಡುಗುತ್ತ) ಮನೆಯಿಂದ ಬರುವಾಗ ನನ್ನ ತಂಗಿ ಹೇಳಿದಳು ಅಣ್ಣಾ ಶಸ್ತ್ರಾಸ್ತ್ರಗಳನ್ನು ನನಗೆ ಕೊಡೆಂದು ಕೊಟ್ಟುಬಿಟ್ಟದ್ದರೆ ಈ ಗದ್ದಲವೇ ಇದಿಲ್ಲಾ, ಸುಖವಾಗಿ ವಿಶ್ರಾಂತಿಮಂದಿರದಲ್ಲಿ ನಿದ್ರೆಯಾಗುತ್ತಿತ್ತು. ಬ್ರಹನ್ನಳೆಯು ಓಡಿಹೋದಳು, ನನ್ನ ಜೀವಕ್ಕೆ ಉರುಳು ತಂದಳು. ( ಪುನಃ ನೋಡಿ ) ಅವರು ಇನ್ನೇನು ಸಮೀಪಕ್ಕೆ ಬಂದಂತಾಯಿತು, ನಮ್ಮದೂ ಬಂದ ಹಾಗೇ; ಇನ್ನೇನು ದೂರವಿಲ್ಲಾ. ಬಹಳ ಹತ್ತಿರ (ಪುನಃ ನೋಡಿ ) ಅಯ್ಯೊ ಅಪ್ಪಾ ಅವ್ವಾ ( ಎಂದು ಗಟ್ಟಿಯಾಗಿ ಕೂಗುವನು. ಅರ್ಜುನನು ವೇಷ ವನ್ನು ಬದಲಾಯಿಸಿಕೊಂಡು ಬರುವನು. )

**ಅರ್ಜುನ:**— ( ಭಕ್ತಿಯಿಂದ ಕೈಮುಗಿದು. )

ರಾಗ, ಶಂಕರಾಭರಣ

ಕಂದ,

ಜಯ ಜಯ ಜನಾರ್ದನ ಹರಿ। ಗೋಪೀನಾಥ ವಿಶ್ವವ್ಯಾಪಕ ಮುಕುಂದ
ಶ್ರೀಹರಿ। ಕಮಲನಯನ ಪೀತಾಂಬರಧಾರಿ ವಿಜಯ ವಿಠ್ಠಲ ಶ್ರೀಕೃಷ್ಣಹರೀ।

( ಕೃಷ್ಣನು ಒಳಗಿಂದ ಕಂದವನ್ನು ಅನ್ನುತ್ತಾ ಬರುವನು. )

**ಕೃಷ್ಣ:**—

ರಾಗ. ಕೇದಾರಗೌಳ

ಕಂದ,

ಅರಿದೆನು ನಿನ್ನಯ ಭಾವಕೆ। ಬಲುಮೆಯಿಂದಲಿ ಬೇಡು ವರಗಳ। ನೀಡುವೆ
ನಿನಗೆ ನೀನೆನ್ನ ಪ್ರಾಣಸಖಾ। ತೀರಿತಿಂದಿಗೆ ನಿಮ್ಮಯ ದುಃಖಾ ಜಯವಹುದು
ನಿನಗೆ। ನೀನೇ ಕುರುಕುಲವಿನಾಶಕಾ। ಜಯಕೊಡುವನು ನಿನಗೆ ಭವತಾರಕಾ॥

ಪಾರ್ಥಾ ಜಗದ್ವಿಖ್ಯಾತರಾದ ನೀವೈವರು ಬಹುಕಷ್ಟದಿಂದ ಅರಣ್ಯದಲ್ಲಿ ಅನೇಕ ಉಪವಾಸ ವ್ರತಗಳನ್ನು ಕಳೆದು, ಸತ್ಯಕ್ಕೆ ಕಟ್ಟುಬಿದ್ದು ಸತ್ಯದಿಂದಲೇ ಜಯ ಸಂಪಾದಿಸುವೆವೆಂಬ ಮಹಾತ್ಮನಾದ ಧರ್ಮನ ಪವಿತ್ರವಾಕ್ಯದಂತೆ ಪಾರಾದ ನಿಮಗೆ ನನ್ನ ಶತಶಃ ವಂದನೆಗಳು. ( ನಮಸ್ಕರಿಸುವದಕ್ಕೆ ಕೈಯೆತ್ತುವಷ್ಟ ರಲ್ಲಿ ಅರ್ಜುನನು ಕೃಷ್ಣನ ಪಾದಗಳನ್ನು ಹಿಡಿದು )

**ಅರ್ಜುನ:**— ಪ್ರಭೋ ನಿನ್ನ ಕರುಣಕಟಾಕ್ಷದಿಂದ ಬಂದ ಕಂಟಕ

ಗಳಿಗೆ ಎದೆಗೊಟ್ಟು ಜಯಸಂಪಾದಿಸುತ್ತ ಬಂದೆವಲ್ಲದೆ ಅನ್ಯಥಾಅಲ್ಲಾ. ಪಾಂಡವರ ಪ್ರತಿಯೊಂದು ಕಾರ್ಯಕ್ಕೆ ಸಮಭಾಗಿಯಾದ ನೀನು ನಮಗೆ ಆಶೀರ್ವಾದ ಮಾಡುವದನ್ನು ಬಿಟ್ಟು ನಿನ್ನ ಪಾದಸೇವಕರಾದ ಬಡಪಾಂಡವರಿಗೆ ನಮಸ್ಕರಿಸಿ ಪಾಂಡವರನ್ನು ಪಾಪಕೂಪದಲ್ಲಿ ನೂಕಬೇಕೆಂದಿರುವೆಯಾ ದೇವಾ! ಮೊದಲು ನಿನ್ನ ಅಮೃತ ಹಸ್ತಗಳನ್ನು ಕೆಳಗಿಬಿಡು. ಇಡೀ ಬ್ರಹ್ಮಾಂಡವೇ ನಿನ್ನ ಪೂಜೆಮಾಡುವದಲ್ಲವೆ. ಸಕಲ ಜಗತ್ತು ನಿನ್ನ ಹೃದಯದಲ್ಲಿರುವದಲ್ಲವೆ. ಮೂವತ್ಮೂರುಕೋಟಿ ದೇವತೆಗಳು ನಿನ್ನ ಪಾದಸೇವೆ ಮಾಡುವರಲ್ಲವೆ. ಇಂತಹ ಅಖಿಲಾಂಡಕೋಟಿ ಬ್ರಹ್ಮಾಂಡನಾಯಕನಾದ ನಿನ್ನನ್ನು ಮಿತ್ರ ನನ್ನಾಗಿಪಡೆದ ಪಾಂಡವರ ಭಾಗ್ಯದಮುಂದೆ ಬೇರೊಬ್ಬನ ಭಾಗ್ಯವುಂಟೆ, ದೇವಾ ಈ ನಿನ್ನ ವರದ ಹಸ್ತವು ಪಾಂಡವರ ತಲೆಯಮೇಲೆ ಸದಾ ಇರಬೇಕೆಂಬುದೊಂದೇ ನಿನ್ನ ಸಖನ ಆಸೆ.

ಕೃಷ್ಣ:— ( ಕಣ್ಣಲ್ಲಿ ಆನಂದ ಬಾಷ್ಪಗಳನ್ನು ಸುರಿಸುತ್ತಾ ) ಪ್ರಾಣ ಸಖಾ ಪಾರ್ಥಾ ಏಳು, ಪಾಂಡವರ ಸತ್ಯಕೀರ್ತಿಯು ಭಾರತದಲ್ಲಿ ಮೆರೆಯ ಲೆಂಬುದೇ ಕೃಷ್ಣನ ಅಭಿಲಾಷೆ. (ಆಶೀರ್ವಾದ ಮಾಡಿ) ಅರ್ಜುನಾ ಅದೋ ಬರುವ ವೈರಿಗಳನ್ನು ಮಕ್ಕಳಾಟದಂತೆ ಆಯಾಸವಿಲ್ಲದೆ ಯುದ್ಧಮಾಡಿ ಜಯ ಶಾಲಿಯಾಗು ( ತಲೆಯಮೇಲೆ ಕೈಯಿಟ್ಟು ಮಾಯವಾಗುವನು ಇದೆಲ್ಲ ವನ್ನು ನೋಡಿ ಉತ್ತರನು ಚಕಿತನಾಗಿ ಅರ್ಜುನನ ಪಾದಗಳನ್ನೇ ಹಿಡಿದು ಭಕ್ತಿಯಿಂದ )

ಉತ್ತರ:— ದೇವಾ ! ನಾನು ಹೇಡಿಯಾದರೂ ದೇವನಾರೆಂಬುದನ್ನು ಅರಿಯದಷ್ಟು ಪಾಪಿಯೇ ನಾನು ! ಸ್ವಾಮಿಯೇ, ಈಗ ಬಂದವನು ದೇವ ನಲ್ಲವೆ ? ಭಕ್ತಪಾಲಕನಲ್ಲವೆ ? ಮೋಕ್ಷದಾಯಕನಲ್ಲವೆ ? ತಾವು ಯಾರೆಂಬು ದನ್ನು ಹೇಳದ ವಿನಃ ನನ್ನ ಶಿರವನ್ನು ಕತ್ತರಿಸಿದರೂ ಈ ಪೂಜ್ಯಪಾದಗಳನ್ನು ಬಿಡುವವನಲ್ಲ ( ಇದನ್ನು ಕೇಳಿ ಅರ್ಜುನನು ಉತ್ತರನ ತಲೆಯಮೇಲೆ ಕೈ ಯಿಟ್ಟುಗೌರವಿಸಿ ) ಉತ್ತರಾ, ಏಳು ! ನಾನೇ ಅರ್ಜುನನು. ನಿನ್ನ ಅರಮನೆ ಯಲ್ಲಿ ಇರುವವರೇ ಪಾಂಡವರು ! ಇರಲಿ ಈಗ ಸಮಯವಿಲ್ಲಾ ಅದೋ, ವೈರಿಗಳು ಬಂದರು. ನೀನು ಹೆದರದೆ ಸುಮ್ಮನೆ ಕುಳಿತು ಬಿಡು. (ಒಳಗೆ ನೋಡಿದಂತೆ) ಉತ್ತರಾ, ಅಲ್ಲಿ ನೋಡು, ರತ್ನಖಚಿತವಾದ ರಥದಿಂದಿಳಿದು

ಮಾರ್ತಾಂಡನಂತೆ ಬರುತ್ತಿರುವ ಗಂಭೀರ ಮೂರುತಿಯನ್ನು! ಅವರೇ ಅರ್ಜುನನನ್ನು ಎತ್ತಿ ಆಡಿಸಿದ ಮುತ್ತಾತ ಗುರು ಭೀಷ್ಮರು!

ತಾಳ ಎಕ್ಕಾ, ಪದ. ರಾಗ ತಿಲಕ್‌ಕಾಂಬೋದ.
ನೋಡು ನೋಡು ಸೂರ್ಯಪ್ರಭೆಯ। ಕರುಣಮಯಿಯ ಪಾಂಡುಕೃಪೆಯ।
ಪಾರಶಾರ್ಯ। ಭೀಷ್ಮಾಚಾರ್ಯ ಗಂಗಾಸುತ ಗಾಂಗೇಯ।

ಉತ್ತರಾ ಇದೋ ಕೋಟಿಸೂರ್ಯ ಪ್ರಕಾಶಮಾನರಾಗಿ ಈಗ ರಥದಿಂದಿಳಿದವರೇ, ತನ್ನ ಸತ್ಪುತ್ರ ಅಶ್ವತ್ಥಾಮನಿಗೂ ಸಹ ಕಲಿಸದಿದ್ದ ಧನುರ್ವಿದ್ಯೆಯನ್ನು ನನಗೆ ಕಲಿಸಿ ಜಗದೇಕ ವೀರನನ್ನಾಗಿ ಮಾಡಿದ ಕದನಕೋಲಾಹಲ ದ್ರೋಣಾಚಾರ್ಯರು. ಅವರ ಬಲಭಾಗದಲ್ಲಿರುವ ಗೋಮುಖನೇ ನಮ್ಮ ಸರ್ವಸ್ವವನ್ನು ಅಪಹರಿಸಿ ಕೈಯಲ್ಲಿ ಮಣ್ಣಿನ ಪಾತ್ರೆಯನ್ನು ಹಿಡಿಸಿದ ಜೂಜಿನಜಾಣ ದುರ್ಯೋಧನ. ಕೆಂಪೇರಿದ ಕಣ್ಣುಗಳಿಂದ ಭಯಂಕರ ಉಗ್ರಮೂರುತಿಯಾಗಿ ಕಾಣುವವನೇ ನಿಷ್ಪಾಂಡವ ಪೃಥ್ವಿ ಮಾಡುವೆನೆಂದು ಪ್ರತಿಜ್ಞೆಮಾಡಿ ಬಂದ ಚತುರಮಾತಿನ ಕರ್ಣ. ಅವನ ಹಿಂದೆ ಹೇಡಿಯಂತೆ ಕಾಣುವವನೇ ನನ್ನ ಅಣ್ಣ ಭೀಮಸೇನನಿಗೆ ಬಿಟ್ಟಹೆಣದ ಮುಖದ ಹರಿಕೆಯ ಕೋಣ ದುಶ್ಶಾಸನ. ಅವನ ಜೊತೆಯಲ್ಲಿರುವವನೇ ಶಿವನ ಹಣೆಗಣ್ಣಿನ ಸಮಾನನಾದ ಜಿತಸಂಗ್ರಾಮಶೂರ ಅಶ್ವತ್ಥಾಮ. ಅವನ ಹಿಂದೆ ಬರುವವನೇ ಕೌರವನ ಬಾಗಿಲು ಕಾಯುವ ಶ್ವಾನ ಜಯದ್ರಥಾ. ಉತ್ತರಾ ಇಂದು ನನಗಾದ ಅಪಾರ ಆನಂದವನ್ನು ಹೇಳುವದಕ್ಕಸಾಧ್ಯ. ಯಾವ ಗುರುಗಳು ನನ್ನನ್ನು ಧನುರ್ವಿದ್ಯದಲ್ಲಿ ಕುಶಲಮತಿಯನ್ನಾಗಿ ಮಾಡಿರುವರೋ ಆ ಕರುಣಾಮೂರುತಿಯೇ ಶಿಷ್ಯನ ಪರೀಕ್ಷೆಗಾಗಿ ಬಂದಿರುವರು. ಅವರ ಪರೀಕ್ಷೆಯಲ್ಲಿ ಉತ್ತೀರ್ಣನಾಗಿ ಅವರಿಂದ ಆಶೀರ್ವಾದವೆಂಬ ಬಹುಮಾನವನ್ನು ಪಡೆಯುವೆ ಅಲ್ಲದೆ ಗುರುಗಳ ಚರಣಗಳಿಗೆ ವಂದನಾಪೂರ್ವಕವಾಗಿ ಎರಡು ಬಾಣಗಳನ್ನು ಬಿಟ್ಟು ಇವನೇ ನಿಮ್ಮ ಪ್ರಿಯಶಿಷ್ಯ ಪಾರ್ಥನೆಂಬದಾಗಿ ತಿಳಿಸಿ ಶರಸಂಧಾನವನ್ನಾರಂಭಿಸುವೆನು ( ಒಳಗೆ ನಿಂತು ) - ಜೈಗುರುಭೀಷ್ಮ, ದ್ರೋಣ ಸಮರ್ಥ ಎಂದು ಬಾಣಬಿಡುವನು )

ಭೀಷ್ಮ:— ಧನ್ಯ ಧನ್ಯ ಪಾರ್ಥ ಜಯಶಾಲಿಯಾಗು ( ಎಂದು ಮುಂದೆ ಬಂದು ) ಪಾರ್ಥಾ ನಿನ್ನ ದರ್ಶನದಿಂದುಂಟಾದ ಆನಂದ ಬಾಷ್ಪಗಳ ವೇಗ

ವನ್ನು ತಡೆಯಲಾರಿ! ಪಾರ್ಥಾ ಸ್ವಲ್ಪ ಮರೆಯಾಗಿ ನಿಲ್ಲು. ಈ ಭೀಷ್ಮನ ದೃಷ್ಟಿ ತಗಲಬಹುದು ಮಗು ಭಾರತೀಯನಾದ ನೀನು ಸ್ವಾತಂತ್ರ್ಯಮಯ ಬಾಣಗಳನ್ನು ಭೀಷ್ಮನ ಅಪವಿತ್ರ ಪಾದಗಳಿಗೆ ಬಿಟ್ಟು ನಿನ್ನ ಕರ್ತವ್ಯವನ್ನು ಕೊನೆಗಾಣಿಸಿದೆ. ಆದರೆ ಭೀಷ್ಮನು ಸ್ವಕರ್ತವ್ಯವನ್ನು ಮರೆತು ಅಯೋಗ್ಯನಾದನು. (ಪ್ರ) ಆಚಾರ್ಯರೇನೋಡಿದಿರೊ ಅರ್ಜುನನ ಗುರುಭಕ್ತಿಯನ್ನು(ಇಷ್ಟರಲ್ಲಿ ಅರ್ಜುನನು ವಳಗಿಂದ ಪುನಃ ಬಾಣಗಳನ್ನು ಬಿಡುವನು) ಆಚಾರ್ಯರೇನೋಡಿದಿರೋ ಕ್ಷತ್ರಿಯಕುಲ ಗಂಡುಗಲಿ ಪಾರ್ಥನ ಪರಾಕ್ರಮವನ್ನು. ಎರಡು ಬಾಣಗಳಿಂದ ಪುಷ್ಪಾರ್ಜನೆ ಮಾಡಿದನು. ಮತ್ತೆರಡು ಬಾಣಗಳನ್ನು ಕಿವಿಗಳಿಗೆಬಿಟ್ಟು ಗುರುವರ್ಯಾ ಕ್ಷೇಮದಿಂದಿರುವಿರಾ ಎಂದು ಕುಶಲ ಪ್ರಶ್ನೆಮಾಡಿದನು ದುರ್ಯೋಧನ ಈಗಲಾದರೂ ಸುಬುದ್ಧಿಯನ್ನು ಕಂಡುಕೊಂಡು ಸುಖಿಯಾಗಿ ಬಾಳು. ಪಾಂಡವರಿಗೆ ನೀನು ಕೊಡಬಾರದ ಕಷ್ಟವನ್ನು ಕೊಟ್ಟಿದ್ದರೂ ಅವುಗಳನ್ನೆಲ್ಲ ಮರೆತು ನಿನ್ನ ಕೈಯಲ್ಲಿ ಅವರ ಸಖ್ಯದ ಕೈ ಕೊಡಿಸುವೆನು.

**ದುರ್ಯೋಧನಃ—** ಆಚಾರ್ಯರೆ ನೀವು ಹೇಳುವದು ಕ್ಷತ್ರಿಯರ ಮಾತಲ್ಲಾ ಆದ್ದರಿಂದ ದುರ್ಯೋಧನನು ಅದನ್ನು ಗಣನೆಗೆ ತರುವದಿಲ್ಲಾ ಮುಂದಿಟ್ಟ ಅಡಿಯನ್ನು ಹಿಂದಿಡುವದು ಕ್ಷತ್ರಿಯಕುಲ ಧರ್ಮವಲ್ಲಾ ನಡೆಯಿರಿ.

**ಕರ್ಣಃ** (ಮುಂದೆ ಬಂದು) ಸ್ವಲ್ಪ ತಾಳಿರಿ ಆ ಹೇಡಿಯ ಸಮಾಚಾರವನ್ನು ನಾನು ತೆಗೆದುಕೊಳ್ಳುವೆ. ಎಲವೋ ವನವಾಸದ ವಟುವೇ ಈಗ ಕಲಿಕೇಸರಿ ಪಾಂಡವರ ಗಂಡ ರಣಪ್ರಚಂಡ ಕದನ ಮಾರ್ತಂಡ ಕರ್ಣನು ಕೈಮಾಡಿ ಕರೆಯುತ್ತಿರುವನು ಎದುರಾಗು ಧೈರ್ಯವಿದ್ದರೆ!

**ಅರ್ಜುನಃ—** (ನಕ್ಕು) ಕತ್ತೆಗೇಕೆ ಮುತ್ತಿನ ಕಿರೀಟವೆಂಬಂತೆ ಸೂತಕುಲಾಧಮನಾದ ನಿನಗೇಕೆ ಶೌರ್ಯಾವೇಶದ ಮಾತುಗಳು, ನಿಜವಾದ ವೀರರು ಮಾತಿನಲ್ಲಿ ವೇಳೆಗಳೆಯದೆ ಕದನದಲ್ಲಿ ಕಾಲಕಳೆಯುವನು. ಆದ್ದರಿಂದ ಕೇಳುವವರಿಗೆ ಮಾತ್ರ ಆವೇಶಹುಟ್ಟುವಂತೆ ವತ್ತಕ್ಷರದ ಹೊಂದಿ

ಕೆಯ ಮಾತುಗಳನ್ನಾಡಿ ವೇಳೆಕಳೆಯದೆ ಪೌರುಷದ ಪುರುಷಾರ್ಥದಲ್ಲಿ ವೇಳೆಗಳೆ!

**ಕರ್ಣ:** ಎಲೋ ಪರಾವಲಂಬಿಯಾದ ಹೇಡಿಪಾರ್ಥ ಈಗ ಹದಿಮೂರುವರುಷ ಕೈಯಲ್ಲಿ ಬಳೆಗಳನ್ನು ಧರಿಸಿ, ಸೀರೆಯನ್ನುಟ್ಟು, ಹೆಣ್ಣು ಗಂಡೆಂಬುವದಕ್ಕೆ ಅನುಮಾನಾಸ್ಪದವಾದ ಹೇಯ ವೇಷವನ್ನು ಧರಿಸಿಕೊಂಡು ಉಂಡಾಡಿಗನಂತೆ ಆಡ್ಡಾಡಿದ ನಿನ್ನ ಮೇಲೆ ಸೂರ್ಯಪುತ್ರ ಕರ್ಣನ ಪವಿತ್ರ ಕೈಗಳಿಂದ ಪಾಪಿಯಾದ ನಿನ್ನ ಮೇಲೆ ಬಾಣಬಿಡಬೇಕಾಯಿತಲ್ಲಾ ಎಂಬ ಯೋಚನೆ

**ಅರ್ಜುನ:**—( ನಸುನಗುತ್ತಾ ) ಎಲೋ ಧರ್ಮಶಾಸ್ತ್ರದಲ್ಲಿ ನಿಪುಣನಾದ ಶೂದ್ರಾ ಅಂದ ತುಂಬಿದ ಸಭೆಯಲ್ಲಿ ನನ್ನ ದ್ರೌಪದಿಯ ಮಾನಭಂಗ ಮಾಡುತ್ತಿದ್ದ ದುಶ್ಯಾಸನನಿಗೆ ಭಲೆ ಭಲೆ ಎಂದು ಬೆನ್ನು ಚಪ್ಪರಿಸಿ ಹುರಿದುಂಬಿಸಿದ ಪಾಪಿ ನೀವು ಹೊತ್ತಿಸಿದ ಬೆಂಕಿಯಲ್ಲಿ ನಿಮ್ಮ ಆಹುತಿಯಾಗದವಿನಃ ಅರ್ಜುನನ ಜಠರಾರಗ್ನಿಯು ಶಾಂತವಾಗಲು ಬೇರೆ ಉಪಾಯವಿಲ್ಲ! ಆದರೆ ಶ್ರೀಕೃಷ್ಣನ ಕೃಪಾರೂಪ ಕವಚಧಾರಿಯಾದ ನಾನು ಪವಿತ್ರ ಪಾಶುಪತಾಸ್ತ್ರವನ್ನು ಉಪಯೋಗಿಸದೆ ಈ ನನ್ನ ಎಡಗಾಲಿನಂಗುಷ್ಠದಿಂದ ಹೀಗೆ ತಿಕ್ಕಿ ನೆಲಕ್ಕೆವರಿಸಿಬಿಡುವೆನು ಹುಳದಂತೆ. ಹಿಂದೇಕೆ ಸರಿಯುವೆ ಬಾ ಮುಂದಕ್ಕೆ ( ಎಂದು ಕೈಹಿಡಿಯುವನು ( ಕರ್ಣನು ಕೊಸರಿಕೊಂಡು )

**ಕರ್ಣ:**— ಥೂ ಹೇಡಿ ಹದಿಮೂರುವರುಷ ಉಪವಾಸ ವನವಾಸಗಳ ಕಷ್ಟವನ್ನು ಗಟ್ಟಿತನದಿಂದ ಸಹಿಸಿ ಅಡ್ಡಾಡುವ ಶಕ್ತಿಬಂದದ್ದೇ ಪುಣ್ಯವೆಂದು ತಿಳಿದಿರುವ ನೀನು ಯುದ್ಧಕ್ಕೆ ಬಂದರೂ ನಿನ್ನನ್ನು ಕೊಲ್ಲುವದಿಲ್ಲಾ ಪರರ ಸಹಾಯವಿಲ್ಲದೆ ಯುದ್ಧಮಾಡಿ ಗೊತ್ತಿಲ್ಲಾ ಇಂತಹ ಕರೆಯುವದಕ್ಕೆ ಹೆಸರಿಲ್ಲದ ನಿನ್ನ ಮೇಲೆ ಕರ್ಣನು ಕೈಮಾಡುವದಿಲ್ಲಾ ಕರೆ ನಿನ್ನ ಆ ಕಳ್ಳಗೊಲ್ಲನನ್ನು ನನ್ನ ರಥದಗಾಲಿಗೆಕಟ್ಟಿ ಮುಳ್ಳಿನ ಎಸೆಯಂತೆ ಎಳೆದಾಡಿ ತ್ರಾಹಿ ತ್ರಾಹಿಮಾಡಿ ಬಿಡುವೆನು ಕರೆದುಕೊಂಡುಬಾ ಅರೆ ನಿಮಿಷದ ಅವಕಾಶ ಕೊಟ್ಟಿರುವೆ. ಹೋಗು ದಿಟ್ಟಿಸಿ ಏನು ನೋಡುವೆ ಷಂಢಾ!

**ಅರ್ಜುನ:**—ಎಲೋ! ಹುಚ್ಚನ ಹಾಗೆ ಇಲ್ಲದ್ದೊಂದು ಮಾತಾಡಿ ನರಕಭಾಗಿಯಾಗಬೇಡ ನನ್ನ ಪವಿತ್ರ ಮೂರುತಿಯಾದ ಪಾಂಡವರ ಪಂಚ

ಪ್ರಾಣನಾದ ಜ ದೋತ್ಪತ್ತಿಗೆ ಕಾರಣನಾದ ಕೃಷ್ಣನನ್ನು ರಥದಗಾಲಿಗೆ ಕಟ್ಟುವೆನೆಂದು ಹೇಳಿದ ನಿನ್ನ ನಾಲಿಗೆಯನ್ನು ಇಲ್ಲಿಂದಿಲ್ಲಿಯೇ ಸೀಳಿಬಿಡಲೋ ಹೇಡಿ ಕಡುಗಲಿಯಾದ ಪಾರ್ಥನಿಗೆ ಷಂಢನೆಂದು ಬೊಗಳಿದೆಯಲ್ಲವೆ. ಕೋಟಿ ಸೂರ್ಯ ಪ್ರಕಾಶವನ್ನು ಧಿಃಕ್ಕರಿಸುವ ಕ್ಷಾತ್ರತೇಜೋಮಯ ಮಾತಾ ಕುಂತೀದೇವಿಯ ಪವಿತ್ರಗರ್ಭದಿಂದ ಹೀನರಕ್ತದ ಷಂಢಪ್ರಾಣಿಯು ಹುಟ್ಟಬಹುದೊ ಅಥವಾ ಹುಟ್ಟಲಾರದೊ ಎಂಬುವ ಅರಿವು ಶೂದ್ರಕುಲದಲ್ಲಿ ಜನಿಸಿದ ಕೋಣನಿಗೆ ಹೇಗೆ ತಿಳಿಯಬೇಕು. ನಿಜವಾದ ಭಾರತೀಯ ಕ್ಷಾತ್ರ ರಕ್ತವು ನಿನ್ನಲ್ಲಿದ್ದರೆ ಎದುರಾಗು!

**ಕರ್ಣಃ**— ಅರ್ಜುನ ಹದಿಮೂರುವರುಷ ಬಿಕ್ಷೆಯ ಅನ್ನವನ್ನು ತಿಂದು ಹಕ್ಕಿಯಾಗಿರುವ ನಿನ್ನಲ್ಲಿ ಕರ್ಣನನ್ನು ಎದುರಿಸುವ ಸಾಮರ್ಥವೆಂದೂ ಬರಲಾರದು. ಕರಿ ನಿನ್ನ ಪಾಂಡವರೊಡೆಯನನ್ನು ವೃಥಾಶ್ರಮಪಡಬೇಡಾ ಕರ್ಣನನ್ನು ಗೆಲ್ಲುವ ಬಲವು ನಿನ್ನಲ್ಲಿಲ್ಲವೆಂದು ಸಾರಿ ಸಾರಿ ಹೇಳುವೆ.

**ಅರ್ಜುನಃ**— ನನ್ನಲ್ಲಿರುವ ಬಲವನ್ನು ವರ್ಣಿಸಿ ಹೇಳುವದರಿಂದ ಪ್ರಯೋಜನವಿಲ್ಲಾ ಇನ್ನು ನಿನಗೆ ಹೇಳಲೇಬೇಕೆಂದರೆ ಸೃಷ್ಟಿಸ್ಥಿತಿಲಯಗಳಿಗೆ ಕಾರಣೀಕರ್ತರಾದ ತ್ರಿಮೂರ್ತಿಗಳ ಬಲವನ್ನೊಟ್ಟುಗೂಡಿಸಿ ನನ್ನನ್ನು ಹೆತ್ತು ಸಂಗ್ರಾಮಕ್ಕೆ ಕಳುಹಿಸಿದ ಮಾತಾ ಕುಂತಿ ದೇವಿಯ ಬಲವಿದೆಂಬುದು ಅಹಂಕಾರದಿಂದ ಮತ್ತನಾದ ಕತ್ತೆಗೆ ಹೇಗೆ ತಿಳಿಯಬೇಕು. ನಾಗರ ಹಾವಿನಂತಿರುವ ನಿನ್ನನ್ನು ಇಲ್ಲಿಯವರೆಗೆ ಬಿಟ್ಟದ್ದು ನನ್ನ ತಪ್ಪು ಬಾ ಪ್ರಚಂಡ ಪಾಶುಪತಾಸ್ತ್ರದಿಂದ ನಿನ್ನ ದೇಹವನ್ನು ಇಬ್ಭಾಗಮಾಡಿ ವಿರಾಟರಾಯನ ಮಹದ್ವಾರಕ್ಕೆ ತೋರಣದಂತೆ ಕಟ್ಟಿಬಿಡವೆ ಬಾ (ಎಂದು ಬಾಣಬಿಡುವನು ಕರ್ಣನು ನೆಲಕ್ಕುರುಳುವನು ಉತ್ತರನು ಹೆದರಿ ಓಡುವನು) ಎಲಾ ಈ ಹೇಡಿ ಕುಮಾರನು ಓಡಿ ಹೋದನಲ್ಲಾ ಸಮರದಲ್ಲಿ ವೈರಿಗಳಿಗೆ ಬೆನ್ನು ತೋರಿಸುವದು ಕ್ಷತ್ರಿಯಧರ್ಮವಲ್ಲಾ ಆದ್ದರಿಂದ ರಥಕ್ಕೆ ರಥವನ್ನೇ ಹಿಮ್ಮುಖವನ್ನಾಗಿ ಹಾರಿಸುವೆನು ಜೈ ಕೃಷ್ಣಮುರಾರಿ (ಎಂದು ರಥವನ್ನೇ ತಿರುಗಿಸುವನು ಇಷ್ಟರಲ್ಲಿ ಜಯದ್ರಥನು ಬಂದು।

**ಜಯದ್ರಥಃ**— ಎಲೋ ನಪುಂಸಕಾ ನಿಲ್ಲು.

**ಅರ್ಜುನಃ—** ಓಹೋ ಗಂಡುಗಲಿ ಲಂಬೋದರ ಉದ್ದವಾಗಿರುವೆ ನೆಂದು ಉನ್ಮುದ್ಧ ಮಾತಾಡುವನು. ಎಲೋ ನಿನ್ನನ್ನು ಸಂಹರಿಸುವದಕ್ಕೆ ಅರ್ಜುನನ ಹಸ್ತ್ರವೇತಕ್ಕೆ ಈ ನಮ್ಮ ಹುಡುಗನ ಬಾಣದಿಂದ ಕೊಲ್ಲಿಸುವೆ.

**ಉತ್ತರಃ—**( ಗಾಂಭೀರ್ಯದಿಂದ ) ದೇವಾ ಇಂತಹ ಪಾಪಿಗಳನ್ನು ಕೊಲ್ಲಿಸಿ ಪವಿತ್ರವಾದ ಈ ಉತ್ತರನ ಧನುಸ್ಸನ್ನು ಏಕೆ ಅಪವಿತ್ರ ಗೊಳಿಸುವಿರಿ.

**ಅರ್ಜುನಃ—**( ನಕ್ಕು ) ಇಷ್ಟಾದರು ಚಿಂತಿಲ್ಲಾ ಮಾತಾಡುವದಕ್ಕೆ ಹೂಂ ಉತ್ತರಾ ತೆಗೆದುಕೋ ನಿನ್ನ ಧನುಸ್ಸನ್ನು ಬಿಡು ಈ ಪಾಪಿಯ ಮೇಲೆ ಬಾಣವನ್ನು ( ಎಂದು ತಾನೇ ಬಲಾತ್ಕಾರದಿಂದ ಹಿಡಿಸಿ ಬಾಣವನ್ನು ಬಿಡಿಸು ವನು. ಜಯದ್ರಥನು ಓಡಿ ಹೋಗುವನು ಉತ್ತರನು ಗೆದ್ದವನಹಾಗೆ ನಟಿ ಸುತ್ತಾ ಅರ್ಜುನನಿಗೆ ನಮಸ್ಕರಿಸುವನು ಅರ್ಜುನನು ನಗುತ್ತ ಆಶೀರ್ವಾದ ಮಾಡುವನು. ಇಷ್ಟರಲ್ಲಿ ದ್ರೋಣನು ಬರುವದನ್ನು ಕಂಡು ) ಉತ್ತರಾ ಅಲ್ಲಿ ನೋಡು ಅರ್ಜುನನಿಗೆ ವಿದ್ಯೆಕಲಿಸಿದ ನನ್ನ ಕುಲಸ್ವಾಮಿಯ ಬರುವಿಕೆಯನ್ನು. ದೇವಾ ನಿಮ್ಮ ಆಶೀರ್ವಾದ ಬಲದಿಂದ ಪಾಂಡವರು ಸತ್ಯದಿಂದಲೇ ಪಾರಾಗಿ ಪಾಪಿಗಳಾದ ಕೌರವರೊಡನೆಯುದ್ಧಕ್ಕೆ ನಿಲ್ಲುವ ಪ್ರಸಂಗದಲ್ಲಿ ತಮ್ಮ ಮೇಲೂ ಕೈಮಾಡುವ ಪ್ರಸಂಗ ಬಂದುದಕ್ಕಾಗಿ ಕ್ಷಮಿಸಿರಿ. ಈ ಅರ್ಜುನನ ದೇಹವೆ ತಮ್ಮ ಪ್ರತಿಬಿಂಬ ( ಭಕ್ತಿಯಿಂದ ) ದೇವಾ ಅರ್ಜುನನ ಪ್ರತಾಪ ಪ್ರಕಾಶ ಸ್ವಾಮಿಯೆ ಇದು ದ್ರೋಣಾರ್ಜುನರ ಯುದ್ಧವಲ್ಲಾ ಗುರುಶಿಷ್ಯರ ಯುದ್ಧ ವಲ್ಲಾ ಕೇವಲ ತಂದೆ ಮಕ್ಕಳಯುದ್ಧ. ಪುತ್ರಾದಿಚ್ಛೇತ್ಪರಾಜಯಂ

**ದ್ರೋಣ:** –( ಆನಂದದಿಂದ ) ಪಾರ್ಥಾ ತಡಮಾಡಬೇಡಾ ಗುರು ವೆಂದು ಹಿಂಜರಿಯಬೇಡಾ ಇಂದಿಗೆ ದ್ರೋಣನ ಮಗನೆಂದರೆ ಅಶ್ವತ್ಥಾಮ ನಲ್ಲಾ ಅರ್ಜುನನು. ಬಿಡುಬಾಣಗಳನ್ನು ( ಎಂದು ಯುದ್ಧಮಾಡುವರು ದ್ರೋಣನು ಬೀಳುವನು )

**ಅರ್ಜುನಃ—**( ಮುಂದೆ ನೋಡಿ ) ಉತ್ತರ ಅದೋ ನನ್ನ ಪರಮ ಪೂಜ್ಯ ಭೀಷ್ಮರು.

**ಭೀಷ್ಮಃ— ಭಾಪು ಅರ್ಜುನಾ ಭಾಪು.** ಕಲಿಪಾರ್ಥನೆಂಬ ಹೆಸರು ನಿನಗಲ್ಲದೆ ಮತ್ತೊಬ್ಬರಿಗೆ ಶೋಭಿಸಲಾರದು ಅಂತಹ ದ್ರೋಣಾಚಾರ್ಯ

ರನ್ನು ವಂದೇ ಬಾಣದಿಂದ ನೆಲಕ್ಕುರುಳಿಸಿದೆಯಲ್ಲವೆ ಬಾ ನನಗೊಂದು ಪ್ರೇಮಾಲಿಂಗನವನ್ನು ಕೊಡು (ಎಂದು ಅಪ್ಪಿಕೊಳ್ಳುವನು)

**ಅರ್ಜುನಃ**— ಗುರುವರಾ ನಮಗೆ ಸ್ವರಾಜ್ಯ ಬೇಡವೆ ಆಜನ್ಮಪರಿಯಂತ ಪರರ ಗುಲಾಮಗಿರಿಯಲ್ಲಿಯೇ ಕಾಲಕಳೆಯಬೇಕೆ ? ಪಾಂಡವರು ಕಡೆಗೂ ಬಡತನದಲ್ಲಿಯೇ ದೇಹವನ್ನು ಸವಿಸಬೇಕೇ ?

**ಭೀಷ್ಮಃ**— ಅರ್ಜುನ ನಿಮ್ಮ ಸತ್ಯಪ್ರಕಾಶದ ಬೆಳಕು ಭಾರತದಲ್ಲ ಕ್ಷಿಪ್ರದಲ್ಲಿಯೇ ಬೀಳುವದು. ಅರ್ಜುನ ನಿಮಗೆ ಬಡವರೆಂದು ಯಾರು ಹೇಳುವರು. ಭಾಂಡಾರದ ಒಡೆಯನಿಗೆ ಒಡೆಯನಾದ ಶ್ರೀಕೃಷ್ಣ ಪರಮಾತ್ಮನ ಕೃಪೆಯೆಂಬ ಶಾಸ್ವತ ಭಾಂಡಾರವನ್ನೇ ವಶಮಾಡಿಕೊಂಡಿರುವ ನೀವು ಎಂದೆಂದೂ ಬಡವರಾಗುವದಿಲ್ಲಾ ನಶ್ವರವಾದ ಶ್ರೀಮಂತಿಕೆಯನ್ನೇನಂಬಿ ಕಪಿಯಂತೆ ಕುಣಿಯುತ್ತಿರುವ ಕೌರವರು ಬಡವರು ಮಗೂ ಅರ್ಜುನಾ ಈ ವಿಚಾರವಿರಲಿ ನಿನ್ನ ಈಗಿನ ಮುಖ್ಯಕರ್ತವ್ಯವನ್ನು ನೆರವೇರಿಸು. ತಾರಿದವರೆಂದು ಕನಿಕರ ಪಡಬೇಡ ಕನಿಕರದ ಸ್ಥಳವಿದಲ್ಲಾ ಬಿಡು ಬಾಣಗಳನ್ನು !

**ಅರ್ಜುನಃ**—ಜೈ ಗುರು ಭೀಷ್ಮದೇವ. (ಎಂದು ಬಾಣಗಳನ್ನು ಬಿಡುವನು ಭೀಷ್ಮನು ಮೂರ್ಛಿತನಾಗುವನು ಮುಂದೆನೋಡಿ) ಅವರಾರು ಪಾಂಡವರ ಸರ್ವಸ್ವವನ್ನಪಹರಿಸಿದ ವಿಸ್ವಾಸಘಾತುಕ ದುರ್ಯೋಧನ ಬಾ ಬಾ ಅರ್ಜುನನ ಬಾಣದರುಚಿಯನ್ನು ನೋಡು.

**ದುರ್ಯೋಧನಃ**— ಎಲೋ ಪಾಂಡವ ಕುನ್ನಿಯೆ ಸಮ್ರಾಟ ದುರ್ಯೋಧನನೊಡನೆ ಬಡಪ್ರಾಣಿಗಳಾದ ನಿಮಗೇಕೆವೈರ ಪಾಪ ಹೊಟ್ಟೆಗಿಲ್ಲದೆ ಅಲೆದಾಡುವ ನಾಯಿಗಳು(ಇಷ್ಟರಲ್ಲಿ ಜಯದ್ರಥನು ಬರುವನು)

**ಅರ್ಜುನಃ**— ಓಹೋ ಸ್ವಾನನ ಸಹಾಯಕ್ಕೆ ನೀನು ಬಂದೆಯೋ ನೀವಿಬ್ಬರೇಕೆ ನಿಮ್ಮ ಯಾವತ್ತೂ ಹನ್ನೊಂದಕ್ಷೋಹಿಣಿ ಸೈನ್ಯವೂ ನಿನ್ನ ಮೂರುಮಂದಿ ಬಂಧುಗಳೂ ಏಕಕಾಲಕ್ಕೆ ಸಾಗಿಬಂದರೂ ನೊಣದಂತೆ ಎಡಗಾಲಿಂದ ತಿಕ್ಕಿಬಿಡುವೆ ಸಾಯಲು ಸಿದ್ಧರಾಗಿರಿ (ಯುದ್ಧವಾಗುವದು ಅರ್ಜುನನ ಬಾಣದಿಂದ ನೆಲಕ್ಕುರುಳಿ ಬೀಳುವರು)

**ಉತ್ತರಃ**—ದೇವಾ ಇನ್ನೊಂದುಳಿಯಿತು.

**ಅರ್ಜುನಃ**—ಅದೇನು.

**ಉತ್ತರಃ** – ಚಾಣಾಕ್ಷ ಪ್ರಾಣಿ.

**ಅರ್ಜುನಃ**—ಅಂದರೆ ಅರ್ಥವಾಗಲೊಲ್ಲದು !

**ಉತ್ತರಃ**— ದೇವಾ ಅಡವಿಯೊಳಗಿನ ಸಣ್ಣದೊಡ್ಡ ಲಕ್ಷಾಂತರ ಪ್ರಾಣಿಗಳಲ್ಲಿ ಮತ್ಸರ ಮತ್ತೂ ಚಾಣಾಕ್ಷತನ ಈ ಗುಣದ ಪ್ರಾಣಿಯಾವುದು

**ಅರ್ಜುನಃ**—( ಯೋಚಿಸಿ) ಓಹೋ ನರಿ ಅಲ್ಲವೆ ?

**ಉತ್ತರಃ**—ಆಹಾ ಅದೆ. ದೇವಾ ಬರೀ ನರಿಯಲ್ಲಾ ಮೊಂಡಬಾಲದ ಚಾಂಡಾಲನರಿ.

**ಅರ್ಜುನಃ**—ಓಹೋ ಉತ್ತರ ಚಂಡಾಲ ಶಕುನಿಯಲ್ಲವೆ !

**ಉತ್ತರಃ**—ಹೌದು ದೇವಾ ಶಕುನಿ ಅಲ್ಲಾ ಜಗತ್ತಿಗೆ ಅಪಶಕುನಿ.

**ಅರ್ಜುನಃ**—ಉತ್ತರ ಅವನು ಕೈಲಾಗದ ಹೇಡಿಯು ಆದರೂ ಸಿಗುವದು ಕಷ್ಟ ( ಇಷ್ಟರಲ್ಲಿ ಬಂದು )

**ಶಕುನಿಃ**—(ಬೇಕಂತಲೇ) ಹಾಳಾದ ಕೌರವರಿಗೆ ಸಾವಿರಸಲ ಹೇಳಿದೆ ಪರಾಕ್ರಮಶಾಲಿಗಳೂ ಸತ್ಯಪಕ್ಷಪಾತಿಗಳೂ ಆದ ಪಾಂಡವರೊಡನೆ ಯುದ್ಧ ಬೇಡವೆಂದು ಆದರೆ ಅಹಂಕಾರದಿಂದ ನನ್ನ ಮಾತನ್ನು ಕೇಳದೆ ಮಲಗಿದರು ನೆಲದಮೇಲೆ !

**ಉತ್ತರಃ**—ಮಲಗಿಲ್ಲಾ ನೆಲಕ್ಕೆವರಗಿದ್ದಾರೆ.

**ಶಕುನಿ:**—(ಕದ್ದು) ಯುಕ್ತಿಯಿಂದ ಪಾರಾಗಬೇಕು. ಈಗ ಮಾತಾಡಿಸಲೋ ಅಥವಾ ಕಾಲಿಗೆ ಬುದ್ಧಿ ಹೇಳಲೋ (ಪ್ರ) ಏನು ಅರ್ಜುನ ಕುಶಲವೆ

**ಅರ್ಜುನಃ**—ಕೈಸಾಗದ ಮೇಲೆ ಕುಶಲವೆ.

**ಶಕುನಿಃ**—( ದೇಶಾವರಿ ನಗೆಯಿಂದ) ಅರ್ಜುನ ಏನೆಂದರೂ ಬಹಳ ಸೊರಗಿರುವೆ ಪಾಪ !

**ಉತ್ತರಃ**—ಸ್ವಲ್ಪ ತಾಳಿರಿ. ಪಾಪ ಪರಿಹಾರವಾಗುತ್ತಿದೆ. ಬಹಳ ಬೇಡ ವಂದಾದರೆ ಸಾಕು ಪಾಪ ಶ್ವಾಸದೊಡನೆ ನೆತ್ತಿಗೆ ಬರುತ್ತಿದೆ. ವತ್ತಿ

**ಶಕುನಿಃ** – ( ಹೆದರಿ ) ಇವರೆಲ್ಲರೂ ವ್ಯರ್ಥವಾಗಿ ಅಹಂಕಾರಕ್ಕೆ ಬಿದ್ದು ಬಿದ್ದಿರುವರು.

**ಉತ್ತರಃ**— ಬಿದ್ದಿಲ್ಲಾ ನೀವು ಬಂದಕೂಡಲೇ ಏಳ ಬೇಕೆಂದು ಸಂಕಲ್ಪಮಾಡಿಕೊಂಡು ಮಲಗಿರುವರು

**ಅರ್ಜುನಃ**— ( ಸಿಟ್ಟಿನಿಂದ ) ಎಲೋ ಪಾಂಡವರ ಜನ್ಮದ್ರೋಹಿ ನಿನ್ನನ್ನು ಮೊದಲೇ ಸಂಹರಿಸಿದ್ದರೆ ಪಾಂಡವರಿಗೆ ವನವಾಸವೇ ಬರುತ್ತಿರಲಿಲ್ಲಾ. ಈಗಲಾದರೇನಾಯಿತು. ಉತ್ತರಾ ಎರಡು ಬಾಣಗಳನ್ನು ಬಿಡಲೋ

**ಉತ್ತರಃ**—( ನಗುತ್ತ ) ಪ್ರಭುವೆ ಎರಡೇತಕ್ಕೆ ಒಂದುಸಾಕು.

**ಶಕುನಿಃ** – (ಸ್ವ) ಈಗ ಬಾಣಬಿಡುವದಕ್ಕಿಂತ ಮೊದಲೇ ಬೀಳಬೇಕು ನೆಲಕ್ಕೆ. ತಲೆ ತಿರುವದು ರಕ್ಷಿಸಿರಿ (ಎಂದು ಮೂರ್ಛಿತನಾದಂತೆ ಬೀಳುವನು.)

**ಉತ್ತರಃ**— ಬಂದೆ

**ಅರ್ಜುನಃ**— ಉತ್ತರ ನಿನ್ನ ತಂಗಿಗೂ ಸಖಿಯರಿಗೂ ಏನು ಹೇಳಿದ್ದೆ !

**ಉತ್ತರಃ**—ಒಡವೆ.

**ಅರ್ಜುನಃ**— ತೆಗೆದುಕೋ ನಿನಗೆ ಬೇಕಾದ್ದನ್ನು (ಉತ್ತರನು ಕಿರೀಟ ಮುಂತಾದವುಗಳನ್ನೇ ತೆಗೆದುಕೊಂಡು ರಥದಲ್ಲಿ ಹಾಕುವನು ) ಉತ್ತರ ಇಷ್ಟರಲ್ಲಿ ನಿಮ್ಮ ಗೋವುಗಳು ಪಟ್ಟಣಕ್ಕೆ ಹೋಗಿರಬೇಕು ರಥವನ್ನು ಹತ್ತು ನಡೇ ನಾನೇಗೆದ್ದೆನೆಂದು ಹೇಳಿ ಸುಸ್ವಾಗತವನ್ನೆ ಮಾಡಿಸಿಕೋ ಸಾರಥಿ ಎಲ್ಲಿರುವಳೆಂದು ಕೇಳಿದರೆ ಹಿಂದಿರುವಳೆಂದು ಹೇಳು ನಾವು ನಿನಗೆ ಕಾಣಿಸಿಕೊಳ್ಳುವವರೆಗೂ ಪಾಂಡವರ ಹೆಸರನ್ನೇ ಹೇಳಬೇಡಾ.

**ಉತ್ತರಃ**— ಆಗಲಿ ದೇವಾ.

**ಅರ್ಜುನಃ** —ಯಾರಲ್ಲಿಯೂ ಬಾಯಿಬಿಡಬೇಡ

**ಉತ್ತರಃ** – ನಿಮ್ಮ ಪವಿತ್ರವಾದ ಪಾದದಾಣೆಯಾಗಿ ಒಂದಕ್ಷರವನ್ನು ಸಹ ಉಚ್ಚರಿಸುವದಿಲ್ಲಾ ದೇವಾ ಬರುವೆ ( ನಮಸ್ಕರಿಸುವನು. )

**ಅರ್ಜುನಃ**—ಜಗದೀಶನು ನಿನಗೆ ನನ್ನ ಶಕ್ತಿಯನ್ನು ಕೊಡಲಿ. (ಎಂದು ತಲೆಯಮೇಲೆ ಕೈಯಿಟ್ಟು ಕಳಿಸುವನು )

( ಜಂಗಲ್ ರಸ್ತಾ ಪರದೆ ಬೀಳುವದು )

# ೫ನೇ ಪ್ರವೇಶ.

( ವಿರಾಮನು ಪ್ರವೇಶಿಸುವನು )

**ವಿರಾಮಃ—** ಅಲ್ಲಾ ಅರಮನೆಯಲ್ಲಿ ಸೇವಕನಾದವನು ಬರೇ ಸೇವೆ ಯಲ್ಲಿಯೇ ಕಾಲಕಳೆದರೆ ಪ್ರಪಂಚಿಗನಾಗುವದು ಯಾವಾಗ ( ಯೋಚಿಸಿ) ಓಹೋ ಇತರರ ಹಾಗೆ ಸಂಸಾರೊಂದಿಗನಾಗಬೇಕಾದರೆ ಮೊದಲು ಲಗ್ನ ವಾಗಬೇಕು. ಲಗ್ನವಾಗಬೇಕಾದರೆ ಹಣಬೇಕು. ಇದೆಲ್ಲದಕ್ಕೂ ಮೊದಲು ಕನ್ನೆಬೇಕು. ಕನ್ಯಾನಿಶ್ಚಯ ಮಾಡಬೇಕಾದರೆ ಹಿರಿಯರು ಬೇಕು. ನನ್ನ ತಂದೆಯವರು ಲಗ್ನಕ್ಕೆವಯಸ್ಸಿದೆ ಇಷ್ಟೇಕೆ ಆತುರವೆಂದು ಮುಂದೆ ಮುಂದೆ ಹಾಕುತ್ತಿರುವರು. ಏನುಮಾಡಲಿ ಹಿರಿಯರ ಮಾತಿನಂತೆ ಹೋದರೆ ಒಂಟಿಗ ನಾಗಿ ಕಾಲಕಳೆಯ ಬೇಕಾಗುವದು. ಈಗ ಸಾಧಾರಣವಾಗಿ ನಾಲ್ಕಾರು ತಿಂಗಳಿಂದ ಸರಿಯಾಗಿ ನಿದ್ರೆಯೇ ಇಲ್ಲಾ. ರಾತ್ರಿನೆಲಕ್ಕೆ ಮೈಹಚ್ಚುವ ದೊಂದೇ ಅವಕಾಶ ನನಗೆ ವಚನಕೊಟ್ಟ ದುಶ್ಶೀಲೆಯು ಶ್ರಿಂಗಾರದಿಂದ ಬಂದು ವಿರಾಮಾ ಏಳು ಮದುವೆಯನ್ನು ಮುಂದೆ ಹಾಕಬೇಡಾ ನನಗಾದರೂ ನಿನ್ನಂತಹ ಸುಂದರ ಕೋಮಲಾಂಗನನ್ನು ಬಿಟ್ಟು ಬೇರೊಬ್ಬರನ್ನು ವರಿಸ ಲಿಚ್ಛೆಯಿಲ್ಲದೆ ಹಗಲಿರಳು ಬೆಂದು ಬೆಂಡಾಗುತ್ತಲಿರುವೆ ಎಂದು ವಂದೇ ಸವನೇ ಪ್ರತಿನಿತ್ಯ ರಾತ್ರಿಸ್ವಪ್ನದಲ್ಲಿ ಬಂದು ಎಚ್ಚರಿಸುತ್ತಿರುವಳು. (ಯೋಚಿಸಿ) ಇನ್ನೊಂದು ವಿಚಾರಾ ಸ್ವಪ್ನದಲ್ಲಿಯೇ ಲಗ್ನವೇಕಾಗಬಾರದು ಅಂದರೆ ತೊಂದ ರೆಯೇ ಇಲ್ಲಾ. ಖರ್ಚಂತೂ ಮೊದಲೇ ಇಲ್ಲಾ ಹೌದು ಹಾಗೇ ಮಾಡ ಬೇಕು. ಬಲ್ಕಿ ಈಗ ಇಷ್ಟರಲ್ಲಿಯೇ ಬರಬಹುದು ( ಇಷ್ಟರಲ್ಲಿ ದುಶ್ಶೀ ಲೆಯು ಪ್ರವೇಶಿಸುವಳು ವಿರಾಮನು ನೋಡಿ) ಓಹೋ ಬಂದಳು ನನ್ನ ಭಾಗ್ಯಲಕ್ಷ್ಮಿ.

**ದುಶ್ಶೀಲೆಃ—** (ಬಂದು) ಏನು ವಿರಾಮಾ ಯುವರಾಜರ ಸುದ್ದಿಯೇ ಇಲ್ಲಾ !

**ವಿರಾಮಃ—** ಆ ಕೇಡಿಯ ಸುದ್ದಿಯನ್ನು ತೆಗೆದುಕೊಂಡು ಏನು ಮಾಡಬೇಕೆನ್ನುವೆ ?

ದುಶ್ಶೀಲೆ:— ಹಾಗಲ್ಲಾ, ಯುದ್ಧಕ್ಕೆ ಹೋದವರು ಬರಲೇಇಲ್ಲಾ ಗೋವುಗಳಿನ್ನೋ ಸುರಕ್ಷಿತವಾಗಿ ಬಂದು ಸೇರಿದವು. ಆದರೆ ಇದರಲ್ಲಿ ಯಾರು ಜಯಶಾಲಿಗಳಾದರೋ ತಿಳಿಯಲಿಲ್ಲಾ. ನಿನ್ನ ಅಭಿಪ್ರಾಯವೇನಿದೆ?

ವಿರಾಮಾ:— ಬಹುಶಃ ಬ್ರಹನ್ನಳೆಯೇ ಗೆದ್ದಿರಬೇಕು-

ದುಶ್ಶೀಲೆ:—ಇಲ್ಲಾ, ಯುವರಾಜರವಿನಃ ಈ ಕಾರ್ಯವಾಗೇಇಲ್ಲಾ.

ವಿರಾಮಾ:— ಛೆ, ಬ್ರಹನ್ನಳೆಯುವಿನಃ ಈ ಕಾರ್ಯವು ಸಾಧ್ಯವೇ ಇಲ್ಲಾ.

ದುಶ್ಶೀಲೆ:—ಪೂರಾಸುಳ್ಳು, ಬೇಕಾದರೆ ಇಬ್ಬರೂ ಪಂಥಮಾಡೋಣ.

ವಿರಾಮಾ:— ಏನೆಂದು ?

ದುಶ್ಶೀಲೆ:— ಬ್ರಹನ್ನಳೆಯು ಗೆದ್ದುದು ನಿಜವಾದರೆ ನಮ್ಮಪ್ಪನ ಒಪ್ಪಿಗೆ ಇಲ್ಲದ, ನಿನ್ನೊಡನೆ ಲಗ್ನವಾಗುವೆ. ನೀನು ಸೋತರೆ!

ವಿರಾಮಾ:— ನಾನು ಸೋತರೆ ನಿನ್ನ ಸೇವೆಮಾಡುವೆನು.

ದುಶ್ಶೀಲೆ:— ಹಾಗಲ್ಲಾ, ನಾನು ಅಗಸರಿಗೆ ಕೊಡುವ ಮೈಲಿಗೆಯ ಸೀರೆಯನ್ನು ನೀನು.

ವಿರಾಮ:— ತಿಳಿಯಿತು ಆದರೂ ಬಹಳ ಮೈಲಿಗೆಯ ಸೀರೆಯನ್ನು ಕೊಡಬೇಡಾ

ದುಶ್ಶೀಲೆ:— ಏಕೆ ?

ವಿರಾಮ:— ಒಗೆಯುವದಕ್ಕೆ ತೊಂದರೆ!

( ಇಷ್ಟರಲ್ಲಿ ಮಣಿಮಂತನೆಂಬ ಸೇವಕನು ಅವಸರದಿಂದ ಬಂದು )

ಮಣಿಮಂತ:— ವಿರಾಮಾ, ಯುವರಾಜರು ಜಯಶಾಲಿಗಳಾಗಿ ಬರುತ್ತಿರುವರಂತೆ.

ವಿರಾಮ:— ಎಲೋ, ನಿಜವಾಗಿ ಗೆದ್ದಿರುವರೇನೋ?

ಮಣಿಮಂತ:—ನನಗೇನುಗೊತ್ತು ಮಹಾರಾಯಾ! ಸುದ್ದಿ ಮಾತ್ರ ಬಂದಿದೆ. ಈಗ ಪಟ್ಟಣದಲ್ಲಿ ಶೃಂಗಾರವೇ ಶೃಂಗಾರ.

**ವಿರಾಮಃ**— ಹೌದು. ಈಗ ನಾನೇನುಮಾಡಲಿ.

**ದುಶ್ಶೀಲಾ**:— ಈಗ ಯಾವ ವಿಚಾರವೂ ಬೇಡಾ ಯಾಕಂದರ ಇದೆಲ್ಲವೂ ಹಾಂಕೆಯುಸುದ್ದಿ. ನಡೆಯಿರಿ ನಮ್ಮ ನಮ್ಮ ಕೆಲಸಗಳಲ್ಲಿ ತೊಡಗುವ. (ಹೋಗುವರು)

( ವಿರಾಟರಾಯನು ಅರಮನೆಯ ಒಂದು ಭಾಗದಲ್ಲಿ ಊಟಮಾಡಿ ಯೋಚನೆಯಲ್ಲಿ ಕುಳಿತು )

ವಿರಾಟ:— ಸುಧಾ,

**ಸುಧೇಷ್ಣೆ**:— ಬಂದೆ

**ವಿರಾಟಃ**— ಉತ್ತರೆಯನ್ನು ಕರೆ ( ಕರೆದುಕೊಂಡು ಬರುವಳು. ) ಸುಧಾ ಈ ದಿವಸ ಎಡಗಣ್ಣು ಎಡಬಿಡದೆ ಹಾರುತ್ತಿರುವದು. ಕುಮಾರನು ಜಯಶಾಲಿಯಾಗಿ ಬರುವೆನೆಂಬ ಭರವಸೆಯಿಂದ ಪಟ್ಟಣವನ್ನು ಶೃಂಗರಿಸಿ ಭಾರತದ ಧ್ವಜಪತಾಕೆಗಳನ್ನು ಏರಿಸಿದ್ದೂ ಆಯಿತು ಆದರೆ.

**ಸುಧೇಷ್ಣೆಃ**— ಮಹಾರಾಜ ಕ್ಷತ್ರಿಯ ಕುಮಾರನಲ್ಲವೆ ?

**ವಿರಾಟ**:— ಹೌದು.

**ಸುಧೇಷ್ಣೆ**:— ಅಂದಮೇಲೆ ಸಂಶಯಕ್ಕೆ ಕಾರಣವೇ ಇಲ್ಲಾ. ನಿಶ್ಚಯವಾಗಿ ನನ್ನ ರತ್ನವೇ ಜಯಶಾಲಿಯಾಗಿ ಬರುವದು.

**ವಿರಾಟಃ**— ಉತ್ತರಾ ನಿನ್ನ ಅಭಿಪ್ರಾಯವೇನಿದೆ ?

**ಉತ್ತರೆ**:— ಜನಕಾ ನನ್ನ ಉತ್ತರಕ್ಕೆ ಸ್ವಲ್ಪ ಅವಕಾಶವುಂಟು.

ವಿರಾಟ: ಇರ್ಲಿ ಉತ್ತರಾ, ಪಗಡೆಯನ್ನು ತೆಗೆದುಕೊಂಡುಬಾ.

**ಉತ್ತರೆ**:— ದುಶ್ಶೀಲಾ,

**ದುಶ್ಶೀಲೆಃ**— ಮಹಾರಾಣಿ ಏನಪ್ಪಣೆ ?

**ಉತ್ತರೆಃ**— ಪಗಡಿಗಳನ್ನು ತೆಗೆದುಕೊಂಡುಬಾ.

**ದುಶ್ಶೀಲೇಃ**— ಅಪ್ಪಣೆ ( ಎಂದು ತೆಗೆದುಕೊಂಡು ಬರುವಳು ) ಮಹಾರಾಜನು ಹೆಂಡತಿಯನ್ನೂ ಮಗಳನ್ನೂ ಕರೆದುಕೊಂಡು ಆಟಕ್ಕೆ ಪ್ರಾರಂಭಿಸಿದನು. ಆಡುವಾಗ ಮಧ್ಯದಲ್ಲಿ ಒಮ್ಮೆಲೇ ಹಣೆಗೆ ಕೈಹಚ್ಚಿ ಉತ್ತರೇ ಕಂಕಭಟ್ಟನನ್ನು ಕರೆಯಿಸು.

**ಉತ್ತರೆ:—** ದುಶ್ಶೀಲೆ

**ದುಶ್ಶೀಲೆ:—** ಮಹಾರಾಣಿ ಏನಪ್ಪಣೆ ?

**ಉತ್ತರೆ:—** ಕಂಕಭಟ್ಟರನ್ನು ಕರೆದುಕೊಂಡು ಬಾ.

**ದುಶ್ಶೀಲೆ:—** ಅಪ್ಪಣೆ (ಎಂದು ಹೋಗಿ ಕರೆದುಕೊಂಡು ಬರುವಳು. ಧರ್ಮರಾಯನು ಪಂಚಾಂಗದ ಗಂಟನ್ನು ಹಿಡಿದುಕೊಂಡು ಕೂಡ್ರುವನು )

**ವಿರಾಟ:** ಭಟ್ಟರೆ, ಯುದ್ಧಕ್ಕೆ ಹೋದ ಸಾರಥಿ ಮತ್ತೂ ನನ್ನ ಕುಮಾರನ ಬಗ್ಗೆ ಕವಡಿಗಳನ್ನು ಹಾಕಿ, ಸರಿಯಾಗಿ ಪಂಚಾಂಗವನ್ನು ನೋಡಿ ಹೇಳಿರಿ.

( ಧರ್ಮರಾಯನು ಅದರಂತೆ ಮಾಡಿ )

**ಧರ್ಮರಾಯ:—** ಪ್ರಭೋ, ಹನ್ನೆರಡರಲ್ಲಿ ಒಂದು ಅಂಕೆಯನ್ನು ಹೇಳಿರಿ ?

**ವಿರಾಟ:—** ಹನ್ನೊಂದು.

**ಧರ್ಮರಾಯ —**( ಯೋಚಿಸಿದಂತೆ ಮಾಡಿ) ಪ್ರಭೋ! ಕುಮಾರರ ವಿಷಯದಲ್ಲಿ ಅನುಮಾನ !

**ವಿರಾಟ—**( ಕೋಪಗೊಂಡು ) ಛೀ ! ಯಾಚಕವೃತ್ತಿಯವರಾದ ನಿಮ್ಮಂತವರಿಗೆ ಹಿಂದುಮುಂದಿನ ಯೋಚನೆಯೇ ಇರುವದಿಲ್ಲಾ. ಹೊಟ್ಟೆಯ ಪಾಡಿಗಾಗಿ ಪಂಚಾಂಗವನ್ನು ಹೇಳುವದಷ್ಟೆ!

**ಧರ್ಮರಾಯ—**ಮಹಾರಾಜಾ ! ತಮ್ಮ ಕುಮಾರರ ಮೇಲೆ ನನಗೇನು ಮಾತ್ಸರ್ಯವೆ ?

**ವಿರಾಟ —** ಮಾತ್ಸರ್ಯವಲ್ಲದೆ ಮತ್ತೇನು ? ನಿಜಕ್ಷಾತ್ರ ಸಮ್ರಾಟ ವಿರಾಟರಾಯನ ಮಗನು ಅಪಜಯ ಹೊಂದಿ ಬರುವನೇ ? ಸ್ವಲ್ಪ ಎಚ್ಚರದಿಂದ ಮಾತಾಡಿರಿ

**ಧರ್ಮರಾಯ—**ಪ್ರಭುವೆ! ಸತ್ಯದಿಂದ ಹೇಳಬೇಕೆಂದರೆ ಸಾರಥಿಯೇ ಜಯಶಾಲಿಯಾಗಿ ಬರುವನು. ಇನ್ನು ಬಲಾತ್ಕಾರದಿಂದ ಹೇಳಬೇಕೆಂದರೆ ತಾವು ಹೇಳಿದ್ದೇ ನಿಜವಾಗಲಿ.

**ವಿರಾಟ** –(ಸಿಟ್ಟಿನಿಂದ) ಮುದಿಹದ್ದೆ, ಅನ್ನಕ್ಕಾಗಿ ಬಿದ್ದ ನಿನಗೆ ಮಹಾರಾಜನಾದ ನನ್ನ ಸಂಗಡ ವಾದಿಸುವಷ್ಟು ಧೈರ್ಯ ಬಂದಿತೆ? ನಾಳೆ ಬೆಳಗಾಗುವದರೊಳಗೆ ಸದ್ದಿಲ್ಲದೇ ಹೋಗಬೇಕಾದೀತು ತಿರುಪೆಯವನೇ! (ಎಂದು ಅಲ್ಲಿದ್ದ ಪಗಡೆಯಿಂದ ಹಣೆಗೆ ಹೊಡೆಯುವನು. ರಕ್ತ ಬರುವದು. ಕೂಡಲೇ ಒಳಗಿದ್ದ ಪಾಂಚಾಲಿಯು ತನ್ನ ಶೀರೆಯ ಸೆರಗನ್ನು ಹರಿದು ಕಟ್ಟುವಳು.)

**ವಿರಾಟ**— ಏನಿದ್ದರೂ ಇದೊಂದು ದಿನ ಮಾತ್ರ ನಿಮಗೆ ನನ್ನ ಅರಮನೆ ಯಲ್ಲಿರಲು ಅವಕಾಶ ಕೊಟ್ಟಿರುವೆ.

(ಇಷ್ಟರಲ್ಲಿ ಸೇವಕನು ಅವಸರದಿಂದ ಬಂದು ನಮಸ್ಕರಿಸಿ)

**ಸೇವಕ**—ದೇವಾ! ಯುವರಾಜರು ರಥಾರೂಢರಾಗಿ ಬಂದೇಬಿಟ್ಟರು.

**ವಿರಾಟ** - (ಆನಂದದೀದ) ಸುಧಾ, ಉತ್ತರಾ! ಸಕಲ ಪರಿವಾರ ದೊಂದಿಗೆ ಇದಿರುಗೊಂಡು ಜಯದಾರುತಿಯನ್ನು ಮಾಡಿ ಮಂಗಲವಾದ್ಯ ಗಳಿಂದ ನನ್ನ ಕುಮಾರನನ್ನು ಕರೆದುಕೊಂಡು ಬನ್ನಿರಿ. (ಎಂದು ಹೇಳುವಷ್ಟ ರಲ್ಲಿ ಕುಮಾರನು ಅರಮನೆಯ ಬಾಗಿಲಿಗೆ ರಥವನ್ನು ನಿಲ್ಲಿಸಿ ರಥದಿಂದಿಳಿದು ಬಂದು ತಲೆಯನ್ನು ಹಿಡಿದುಕೊಂಡು ಕೂಡ್ರುವನು. ತಂದೆತಾಯಿಗಳ ಯುದ್ಧದಲ್ಲಿ ಶ್ರಮವಾಗಿರಬಹುದೆಂಬ ಭಾವನೆಯಿಂದ ಉಪಚರಿಸುವರು.)

**ಉತ್ತರೆ**—(ಹತ್ತಿರ ಕುಳಿತು) ಅಣ್ಣಾ! ಯುದ್ಧದ ಸಮಾಚಾರವೇನು?

**ಉತ್ತರ**—ತಂಗೀ, ಅಪಾರ ಸೈನ್ಯ! ಬಹಳ ಬಹಳ ಅಸಾಧ್ಯ ವೀರರು! ಇಂತೂ ದೇವರ ದಯದಿಂದ ಕಷ್ಟಕ್ಕೆ ಜಯ ದೊರೆಯಿತು. ತಂಗೀ, ಆ ಸಖಿ ಯರನ್ನು ಕರೆ. ರಥದೊಳಗಿನ ಕಿರೀಟಗಳನ್ನು ತರುವದಕ್ಕೆ ಹೇಳು. ಅವರ ವರಿಗೆ ಬೇಕಾದ ಸಾಮಾನುಗಳನ್ನು ಕೊಟ್ಟು ಕಳುಹಿಸು.

**ವಿರಾಟಃ** – ಸರಿ ನನ್ನ ಹೊಟ್ಟೆಯಲ್ಲಿ ಹುಟ್ಟಿದುದಕ್ಕೆ ಸಾರ್ಥಕ ವಾಯಿತು.

**ಉತ್ತರೆಃ**—ರಾಜ ಧರ್ಮಕ್ಕನುಸಾರವಾಗಿ ವಿಜಯದಾರುತಿ ಮುಂತಾ ದವುಗಳನ್ನು ಮಾಡೋಣವೆ?

**ಉತ್ತರ:**—ರಥದಿಂದ ಕೆಳಗಿಳಿದ ಕೂಡಲೇ ಸಮಯವು ಸರಿಯಾಗಿತ್ತು ಈಗ ಯಾವುದೂ ಬೇಡಾ ನಿದ್ರೆ ಬಹಳ ಬಂದಿದೆ ಬೆಳಗಾಗಲಿ.

**ಉತ್ತರೆ:** - ಅಣ್ಣಾ ಬೃಹನ್ನಳೆಯು !

**ಉತ್ತರ:**—ಸ್ವಲ್ಪ ದೂರದಲ್ಲಿ ರಥದಿಂದ ಕೆಳಗಿಳಿದಳು. ಬರುವದಿಲ್ಲವೆ ಎಂದೆ ತಾವು ಅರಮನೆಯನ್ನು ಮುಟ್ಟುವದರೊಳಗಾಗಿ ಬರುವೆನೆಂದಳು. ಹಾಗೇ ಆಗಲಿ ಅಂದು ಬಂದೆ.

**ಸುಧೇಷ್ಣಾ:**—ಆಗಲಿ ಉತ್ತರೆ ಮಗುವಿಗೆ ಓಕಳಿಯನ್ನು ಮಾಡಿ ನಿವಾಳಿಸಿ ಅರಮನೆಯ ಹೊಂಗಡೆ ಚೆಲ್ಲಿಸು.

**ಉತ್ತರ:**—ಅಮ್ಮಾ ಈಗ ಯಾವದೂ ಬೇಡ ಸ್ವಸ್ಥವಾಗಿ ಮಲಗಿಕೊಳ್ಳುತ್ತೇನೆ ಬೆಳಿಗ್ಗೆಯದ್ದರೆ ದೇವರಿದ್ದಾನೆ (ಎಂದು ಮಲಗುವನು ಮಹಾರಾಜನು ಅಲ್ಲಿಯೇ ಮಲಗುವನು ಉಳಿದವರು ತಮ್ಮ ತಮ್ಮ ಸ್ಥಳಗಳಿಗೆ ಹೋಗುವರು. ಪಾಂಚಾಲಿಯು ಮೆಲ್ಲನೆ ಅಡಿಗೆಯ ಮನೆಯ ಹತ್ತಿರ ಬಂದು ಭೀಮನನ್ನು ಧರ್ಮರಾಯನನ್ನೂ, ನಕುಲಸಹದೇವರನ್ನೂ ಕರೆದುಕೊಂಡು ಅರ್ಜುನನಿದ್ದ ವಿಶ್ರಾಂತಿ ಮಂದಿರಕ್ಕೆ ಬರುವಳು.)

**ಧರ್ಮ:**—ಭೀಮಾರ್ಜುನರೇ ದಯಾಳು ಮೂರ್ತಿಯ ಕೃಪೆಯಿಂದ ಅಸಾಧ್ಯವಾದ ವನವಾಸವೆಂಬ ಕಂಟಕದಿಂದ ಪಾರಾದೆವು. ಜಗದೇಕ ವೀರರಾದ ನಾವು ಎಂತಹ ಕಷ್ಟಕ್ಕೆ ಸಿಕ್ಕಿದ್ದೆವೆಂದು ವ್ಯಸನವನ್ನು ಮಾತ್ರ ಯಾರೂ ಸ್ವಪ್ನದಲ್ಲಿ ಸಹ ನೆನೆಯಬೇಡಿರಿ ಇಂತಹ ಕಷ್ಟಗಳನ್ನು ಅನುಭವಿಸಿದವರು ಪಾಂಡವರಷ್ಟೇ ಅಲ್ಲಾ. ಈ ಹಿಂದೆ ಆಗಿಹೋದ ಶಿಬಿ, ಹರಿಶ್ಚಂದ್ರ, ಮಯೂರಧ್ವಜ, ನಳ, ಮುಂತಾದ ಮಹನೀಯರು ನಮಗಿಂತಲೂ ಹೆಚ್ಚಿನ ಕಷ್ಟನಷ್ಟಗಳನ್ನು ಅನುಭವಿಸಿರುವರು. ವಿಧಿಸಂಕಲ್ಪದಂತೆ ಆಯಾ ಕಾರ್ಯಗಳು ಆಗೇ ತೀರುವವು. ಇರ್ಲಿ ಈಗ ವಿರಾಟರಾಯನು ಏಳುವದರೊಳಗಾಗಿ ನಾವೆಲ್ಲರೂ ಊರ ಹೊರಗಡೆಯಲ್ಲಿರುವ ನೀರಿನ ಝರಿಯಲ್ಲಿ ಸ್ನಾನ ಮಾಡಿ ಕೃಷ್ಣಪರಮಾತ್ಮನನ್ನು ಸ್ತುತಿಸಿ ಬರಮಾಡಿಕೊಂಡು ನಿಜವಾದ ರೂಪದಿಂದ ಪ್ರಕಟರಾಗುವ ನಡೆಯಿರಿ. (ಎಲ್ಲರೂ ಹೋಗುವರು)

(ರಸ್ತಾ ಪರದಾ ಬೀಳುವದು)

( ವಿರಾಮನು ಪ್ರವೇಶಿಸಿ )

**ವಿರಾಮಃ—** ಈ ದಿವಸ ಏಕೋ ಏನೋ ನಿದ್ರೆಯೇ ಹತ್ತಲಿಲ್ಲಾ. ಸ್ವಪ್ನದ ಮೇಲೆ ಸ್ವಪ್ನ ಆದರೆ ಸ್ವಪ್ನಗಳೇನು ದುಸ್ವಪ್ನಗಳಲ್ಲಾ. ಶುಭಸ್ವಪ್ನಗಳು ದುಶ್ಶೀಲೆಯನ್ನು ಮದುವೆಯಾಗ ಬೇಕಾದರೆ ಬೃಹನ್ನಳೆಯು ಗೆದ್ದುದು ನಿಜವಾಗಬೇಕು ಆದರೆ ಬೃಹನ್ನಳೆಯು ಈ ದಿವಸ ರಾತ್ರಿ ವಿಶ್ರಾಂತಿ ಮಂದಿರದಲ್ಲಿ ಇಲ್ಲಾ. ನಿನ್ನೆ ನಮ್ಮ ಕುಮಾರರಂತೂ ಗೆದ್ದಿರುವ ವಿಷಯವನ್ನು ನಾಳೆ ಬೆಳಿಗ್ಗೆ ಹೇಳುತ್ತೇನೆಂದು ಮಹಾರಾಜರ ಮುಂದೆ ಹೇಳಿದರು. ಅಕಸ್ಮಾತ್ತ ನಮ್ಮ ಈ ಪುಣ್ಯಾತ್ಮನು ಗೆದ್ದದ್ದಾದರೆ ಲಗ್ನಕ್ಕೆ ದೊಡ್ಡದೊಂದು ಸೊನ್ನೆ ಏನುಮಾಡಲಿ. ದೇವಾ ಕೃಷ್ಣಪರಮಾತ್ಮಾ ಬಡವನ ಈ ಗೋಳನ್ನು ಕೇಳಲಾರಿಯಾ! ಹಿಂದೆ ನಿನ್ನಲ್ಲಿ ಹದಿನಾರು ಸಾವಿರ ಗೋಪಿಯರಿದ್ದರಂತೆ, ಪ್ರಭೋ ನನಗೊಂದು ಈ ದುಂಡುಮಾರಿಯ ದುಶ್ಶೀಲೆಯು ದೊರೆಯುವಂತೆ ಮಾಡಬಾರದೆ ?

**ತಾಳ, ದಾದರ** | ಪದ. | ರಾಗಮಾಂಡ

ನಂದ ಗೋಪಿಯ ಕಂದ ಕೃಷ್ಣಯ್ಯಾ । ಚಂದದಿ ಸಲಹೋ ನೀ ಎನ್ನಯ್ಯಾ
ಮಂದರ ಗಿರಿಯ ನಾನಂದದಿ ಎತ್ತಿದ। ಸುಂದರ ಮೂರುತಿ ನೀನಯ್ಯಾ। ದೇವ
ದೇವರಿಗೆಲ್ಲಾ ದೇವನಾಗಿ ಮೆರೆವ । ಮೂರುಲೋಕದೊಡೆಯ ನೀನಯ್ಯಾ
ಇಂದಿನ ದಿನದಲಿ ಕಂದನ ಮೊರೆಕೇಳಿ । ಚಂದದಿ ಮದುವೆಯ ಮಾಡಯ್ಯಾ.

( ರಸ್ತಾಪರದಾ ಎತ್ತುವರು)

( ದರ್ಬಾರದಸೀನು )

ಇಷ್ಟರಲ್ಲಿ ಪಾಂಡವರು ಶುಭ್ರವಾದ ವಸ್ತ್ರಾಭರಣಗಳಿಂದ ಅಲಂಕೃತರಾಗಿ ಕೃಷ್ಣಪರಮಾತ್ಮನನ್ನು ವಿರಾಟರಾಯನ ಸಿಂಹಾಸನದ ಮೇಲೆ ಕೂಡ್ರಿಸಿ ಬಲಗಡೆಯಲ್ಲಿ ಭೀಮಾರ್ಜುನರೂ ಧರ್ಮರಾಯನೂ ನಿಂತಿರುವರು. ಎಡಗಡೆಯಲ್ಲಿ ಪಾಂಚಾಲಿ ನಕುಲಸಹದೇವರು ಮುಂಭಾಗದಲ್ಲಿ ವೈತಾಳಿಕರು ನಿಂತು ಕೃಷ್ಣಪರಮಾತ್ಮನನ್ನು ಸ್ತುತಿಸುತ್ತಿರುವರು. ಈಗದ್ದಲವನ್ನು ಕೇಳಿ ವಿರಾಮನು ಓಡಿಹೋಗುವನು. ವಿರಾಟರಾಯನಿಗೆ ತಿಳಿಸುವದಕ್ಕೆ!

**ತಾಳರೂಪ,** | ಪದ. | ಬ್ಯಾಂಡಚಾಲ

**ಸುಧಾಧರ । ಸೌಹಾರ್ದ್ರ ಶ್ರೀಕರಾ । ಸುಧಾಂಬುಧೀವರ । ಶ್ರೀಭಾಮಾವರ**
**ಶೃಂಗಾರಶೃತಕರಾ । ಜಗದ್ಭಯಕರಾ । ನಿತ್ಯಸ್ತುತ್ಯ ಭಕ್ತವೃಂದ**
**ಮುಕ್ತಿದಾತ ಪಾಂಡವ ಪ್ರಾಣಾಧಾರ ।**

( ರಸ್ತಾಪರದೆ ಬೀಳುವದು ವಿರಾಟನು ವಿರಾಮನಿಂದ ಸಿಂಹಾಸನದ ಮೇಲೆ ಯಾರೋ ಕುಳಿತಿರುವರೆಂಬ ಸುದ್ದಿಯನ್ನು ಕೇಳಿ ಸಂತಾಪದಿಂದ ಊರಿನಿಂದ ಕುಮಾರನನ್ನೂ, ಉತ್ತರೆಯನ್ನೂ, ಸುಧೇಷ್ಣೆಯನ್ನೂ ಕರೆದು ಕೊಂಡು ಪ್ರತಿಯೊಬ್ಬರೂ ಆಯುಧಪಾಣಿಗಳಾಗಿ ಬರುವರು )

**ವಿರಾಟ:** — ಕೋಲಾಹಲ ! ಕದನ ಗಂಡುಗಲಿ ಸಮ್ರಾಟವಿರಾಟನ ಪವಿತ್ರ ಸಿಂಹಾಸನದಮೇಲೆ ಕಳ್ಳತನದಿಂದ ಕೂಡ್ರಬೇಕಾದರೆ ಅವರ ಆಯುಷ್ಯ ಪರಮಿತಿಯು ತೀರಿರಬೇಕು. ಆಗಲಿ ವಿರಾಟನ ಬಾಣದ ರುಚಿಯನು ಸವಿದು ನೋಡಲಿ. ( ಎಂದು ನಾಲ್ವರೂ ಬಾಣಗಳನ್ನು ಹೂಡಿ ಮೊಣ ಕಾಲೂರಿ ಕೂಡ್ರುವರು ರಸ್ತಾಪರದೆ ಎತ್ತುವರು. ಒಳಗೆ ಸಿಂಹಾಸನದ ಮೇಲೆ ಕುಳಿತಿರುವ ಕೃಷ್ಣಮೂರುತಿಯನ್ನೂ, ಆಯುಧಪಾಣಿಗಳಾಗಿ ನಿಂತಿ ರುವ ಪಾಂಡವರನ್ನೂ, ಕಂಡು ಆಯುಧಗಳನ್ನು ಕೆಳಗಿರಿಸಿ ಸರ್ವರೂ ಸಾಷ್ಟಾಂಗನಮಸ್ಕಾರಮಾಡಿ ಕುಳಿತಲ್ಲಿಯೇ) ಅನಂತರ ಕಲ್ಯಾಣಪರಿಪೂರ್ಣ ನಾದ ನಾರಾಯಣ ರಾಜರಿಗೆ ರಾಜರಾದ ಪಾಂಡವರನ್ನೂ ಪತಿವ್ರತಾಶಿರೋ ಮಣಿಯಾದ ದ್ರೌಪದಾ ಮಾತೆಯನ್ನೂ ಅರಮನೆಯ ಹೀನ ಕೆಲಸದಲ್ಲಿ ತೊಡಗಿಸಿದ ಈ ವಿರಾಟನ ಅಪರಾಧವನ್ನು ಕ್ಷಮಿಸಿ, ಈಗಿದ್ದ ಸಿಂಹಾಸನಕ್ಕೆ ಧರ್ಮಮೂರುತಿಯನ್ನು ಅಧಿಪತಿಯನ್ನಾಗಿ ಮಾಡಿ ವಿರಾಟನ ಅಪರಾಧ ಗಳನ್ನು ಮರೆತು ಕಾಪಾಡಬೇಕು

**ಕೃಷ್ಣ** — ಏಳು ಸಮ್ರಾಟಾ, ಈ ವಿಷಯದಲ್ಲಿ ನಿನ್ನ ತಪ್ಪೊಂದೂ ಇಲ್ಲ. ಪಾಂಡವರನ್ನು ಒಂದು ವರ್ಷ ಪರ್ಯಂತರ ನಿನ್ನ ಅರಮನೆ ಯಲ್ಲಿಟ್ಟುಕೊಂಡ ನೀನೇ ಪುಣ್ಯಶಾಲಿ.

**ಕುಮಾರ:** — ಪ್ರಭೋ, ಯುದ್ಧದಲ್ಲಿ ಅಮಾನುಷ ಕೃತಿಯನ್ನು ತೋರಿಸಿ, ನಿಮಿಷಮಾತ್ರದಲ್ಲಿ ಶತ್ರುಗಳ ಸಂಹಾರಮಾಡಿ, ನಮಗೆ ಜಯ ವನ್ನು ಸಂಪಾದಿಸಿಕೊಟ್ಟ ಜಗದೇಕವೀರ ಪಾರ್ಥದೇವನಿಗೆ ನನ್ನ ತಂಗಿ ಯಾದ ಉತ್ತರೆಯನ್ನು ಕೊಡಬೇಕೆಂಬ ನನ್ನ ತಂದೆತಾಯಿಗಳ ಇಚ್ಛೆಯು ಅದನ್ನು ಪೂರ್ಣ ಮಾಡಬೇಕು

ಕೃಷ್ಣಃ— ಅರ್ಜುನಾ,

ಅರ್ಜುನಃ – ದೇವ ಒಂದು ವರ್ಷ ಪರ್ಯಂತರ ವಿದ್ಯೆಯನ್ನು ಹೇಳಿರುವೆ, ಹಾಗೆ ಕೊಡಬೇಕೆಂಬ ಅಭಿಲಾಷೆ ಇದ್ದರೆ ನನ್ನ ಕುಮಾರ ಅಭಿಮನ್ಯುವಿಗೆ ಕೊಡಲಿ.

ವಿರಾಟಃ— ಹಾಗಾದರೂ ಸರಿಯೆ ?

ವಿರಾಮಃ— ಪ್ರಭುಗಳಲ್ಲಿ ಭೃತ್ಯನದೊಂದು ಬೇಡಿಕೆ.

ಕೃಷ್ಣಃ— ಅದೇನು ಹೇಳು ?

ಅರ್ಜುನ॥— ಹೇಳು ಹೇಳು ವಿರಾಮ ನಾಚಬೇಡ.

ವಿರಾಮಃ—( ದುಶ್ಶೀಲೆಯ ಕಡೆಗೆ ನೋಡಿ ) ಸ್ವಾಮೀ ನನಗೆ ಬಹು ದಿನಗಳಿಂದ ಮದುವೆ ಮಾಡಿಕೊಳ್ಳಬೇಕೆಂಬ ಹುಚ್ಚು. ಅದು ನಿಚ್ಚಳಾಗ ಬೇಕೆಂದರೆ ಸರಿಯಾದ ಕನ್ಯಾ ಸಿಗಲಿಲ್ಲಾ. ಈ ದುಶ್ಶೀಲೆಯು ಅಕಸ್ಮಾತ ಭೆಟ್ಟಿಯಾದಳು. ಯುವರಾಜರು ಗೆದ್ದರೆ ನೀನು ನನ್ನ ಸೀರೆಯನ್ನು ಒಗೆ ಯಬೇಕು ಎಂದಳು.

ಅರ್ಜುನಃ— ಹೀಗೆ ಯಾರೆಂದರು ?

ವಿರಾಮಃ— ಈ ದುಶ್ಶೀಲೆ.

ಅರ್ಜುನ:— ನೀನೇನು ಹೇಳಿದ್ದೆ ?

ವಿರಾಮಃ ಸಾರಥಿಯು ಗೆದ್ದರೆ, ನೀನು ನನ್ನನ್ನು ಲಗ್ನವಾಗಬೇಕೆಂದು ಹೇಳಿದ್ದೆ.

ಅರ್ಜುನಃ— ಅದಕ್ಕೆ ಅವಳು ಒಪ್ಪಿದ್ದಳೆ ?

ವಿರಾಮಃ— ಒಪ್ಪಿಗೆ ಅಷ್ಟೇ ಅಲ್ಲ ದೇವ,ವಚನವನ್ನು ಸಹ ಕೊಟ್ಟಿರುವಳು. ಕೈಮೇಲೆ ಕೈಹಾಕಿ, ಆಗ್ಗೇ ಗಟ್ಟಿಯಾಗಿ ಹಿಡಿದಿದ್ದೆ.

ಅರ್ಜುನಃ—( ನಕ್ಕು ) ದುಶ್ಶೀಲಾ ಎಲ್ಲಿ ನಿನ್ನ ಪತಿಗೆ ಸರಿಯಾದ ಒಡಪುಗಳನ್ನು ಹೇಳಿ ಈ ಮಾಲೆಯನ್ನು ಅವನ ಕೊರಳಲ್ಲಿ ಹಾಕು.

ದುಶ್ಶೀಲೆಃ— ( ಅರ್ಜುನನಿಂದ ಮಾಲೆಯನ್ನು ತೆಗೆದುಕೊಂಡು ) ಮಾತಿನಮರಿ ಊಟದಧೊರಿ ಮರಿಯುದೆಕರಿ ವಿರಾಮ ರಾಯರು. ( ಎಂದು ಮಾಲೆಯನ್ನು ಹಾಕುವಳು )

ಕೃಷ್ಣ:—ನಗುತ್ತ ವಿರಾಮಾ ನೀನು !

ಅರ್ಜುನ:—ತೆಗೆದುಕೋ ಮಾಲೆಯನ್ನು. ಸರಿಯಾದ ಒಡಪುಹೇಳಿ ಈ ಹಾರವನ್ನು ಅವಳ ಕೊರಳಲ್ಲಿ ಹಾಕು.

ವಿರಾಮ: ಹಾರವನ್ನು ತೆಗೆದುಕೊಂಡು ಕೇತಿಕೆ ಹೂವಿನ ಬಣ್ಣ ನಡಸಣ್ಣ, ದುಂಡುದಾಳಿಂಬರಹಣ್ಣ, ಕೈಕಾಲುಗಳು ಸಣ್ಣ ಸದ್ದುಮಾಡದೆ ಕದ್ದು ತಿನ್ನುವಳು ಪೇರಲಹಣ್ಣ ದುಂಡುಮಾರಿಯ ದುಶ್ಶೀಲೆ ( ಎಂದು ಮಾಲೆ ಹಾಕುವನು. ಇಬ್ಬರೂ ಎಲ್ಲರಿಗೂ ನಮಸ್ಕಾರಮಾಡುವರು ಸರ್ವರೂ ಆಶೀರ್ವಾದ ಮಾಡುವರು. )

ಕೃಷ್ಣ:—ವಿರಾಟರಾಜ ನಿನ್ನ ಅಭಿಷ್ಟವೇನಿದ ?

ವಿರಾಟ:— ಅಭಿಷ್ಟದೊಡೆಯನಾದ ನೀನು ಸತ್ಯಪಕ್ಷ ಪಾತಿಗಳಾದ ಪಾಂಡವರ ಪವಿತ್ರಪಾದಗಳನ್ನು ವಿರಾಟನ ಅರಮನೆಯಲ್ಲಿ ಬೀಳುವಂತೆ ಮಾಡಿದೆ ಅದೇ ನನ್ನ ಅಭಿಷ್ಟ.

ಉತ್ತರೆ:— ಸರ್ವ ಸಂಕಟಗಳನ್ನೂ ದೂರುಮಾಡಿದ ಸರ್ವಾಂತರ್ಯಾಮಿಯಾದ ಸರ್ವನಿಯಾಮಕನ ಮಂಗಳವನ್ನು ಪಾಡುವ

( ಮಂಗಳ )

ತಾಳ, ತ್ರಿತಾಳ — ರಾಗ ತಿಲಕಾಂಬೋದ

ಜಗದ ಜನಪಾಲಕ | ತಿಲಕ | ಕುಶಲಮತಿ | ವರಪ್ರದಾಯಕ | ಭವಭಯ ದೂರ| ಭಕ್ತೋದ್ಧಾರ | ನಟರಂಗಕೆ ಜಯಕೊಡುವ ಉದಾರ | ಸತ್ಯಭಕ್ತ ಸುವಿಹಾರ | ವಿದಾರ ಅಪಾರಸಾರ | ಮೋಕ್ಷಫಲ ಪ್ರದಾಯಕ |

## ಶುಭಮಸ್ತು

## ಸಂಪೂರ್ಣ

# ನಮ್ಮ ಪುಸ್ತಕಗಳು

## ಸಂಗೀತ ನಾಟಕಗಳು

| | | |
|---|---|---|
| ೧ | ಸಂಪೂರ್ಣ ರಾಮಾಯಣ | ೨ ೦ ೦ |
| ೨ | ಬ್ಲ್ಯಾಕ್ ಮಾರ್ಕೆಟ್ | ೨ ೦ ೦ |
| ೩ | ನರರಾಕ್ಷಸಿ ಅಥವಾ ಹೆಣ್ಣಿನ ಹಂಬಲ | ೨ ೦ ೦ |
| ೪ | ದಶಾವತಾರ | ೧ ೮ ೦ |
| ೫ | ಜೈ ಹಿಂದ | ೧ ೮ ೦ |
| ೬ | ಸತ್ಯ ಹರಿಶ್ಚಂದ್ರ | ೧ ೮ ೦ |
| ೭ | ಧರ್ತಿಮಾತಾ ಅಥವಾ ರೈತರ ಗೋಳು | ೧ ೮ ೦ |
| ೮ | ಉಷಾ ಸ್ವಯಂವರ | ೧ ೮ ೦ |
| ೯ | ಚಿತ್ತೂರ ಕೇಸರಿ | ೧ ೮ ೦ |
| ೧೦ | ಚಿತ್ತೂರ ಪದ್ಮಿನಿ | ೧ ೮ ೦ |
| ೧೧ | ರಂಭಾರಮಣ | ೧ ೮ ೦ |
| ೧೨ | ಝಾಂಸಿ ರಾಣಿ ಲಕ್ಷ್ಮೀಬಾಯಿ | ೧ ೮ ೦ |
| ೧೩ | ಭೂ ಕೈಲಾಸ | ೧ ೮ ೦ |
| ೧೪ | ಜೀವನ-ಸಂಗೀತ | ೧ ೮ ೦ |
| ೧೫ | ಸತಿ ಅನಸೂಯಾ | ೧ ೦ ೦ |
| ೧೬ | ಹುತಾತ್ಮರು (ಏಕಾಂಕ ನಾಟಕ) | ೦ ೮ ೦ |
| ೧೭ | ಸಮ್ರಾಟ ಉತ್ತರಕುಮಾರ | ೧ ೮ ೦ |
| ೧೮ | ಸತ್ಯವಾನ ಸಾವಿತ್ರಿ | ೧ ೮ ೦ |
| ೧೯ | ನಾಗಯಜ್ಞ | ೧ ೮ ೦ |
| ೨೦ | ನವಯುಗ | ೧ ೮ ೦ |
| ೨೧ | ಸಿಂಧೂರ ಶೂರ ಓಲೇಕಾರ ಲಕ್ಷ್ಮಣ | ೧ ೮ ೦ |
| ೨೨ | ಕುರುಕ್ಷೇತ್ರ | ೧ ೮ ೦ |
| ೨೩ | ಬೆಳವಡಿ ಮಲ್ಲಮ್ಮ | ೧ ೮ ೦ |
| ೨೪ | ಚಲೇಜಾವ ಅಥವಾ ಹುತಾತ್ಮ ಮಹಾದೇವ ಮೈಲಾರ | ೧ ೮ ೦ |
| ೨೫ | ಕಾಮಕಲಾಸಿದ್ಧಿ ಅಥವಾ ಕಾಮಶಾಸ್ತ್ರ | ೨ ೦ ೦ |
| ೨೬ | ಹಾಡುವ ಹುಡಿಗೆ (ಕಥಾಸಂಗ್ರಹ) | ೧ ೮ |
| ೨೭ | ಸೋವಿಯಟ್ ಭೂಮಿ (ರಾಜಕೀಯ) | ೧ ೪ |
| ೨೮ | ಸಂಧಿಕಾಲ (ಕಥಾಸಂಗ್ರಹ) | ೧ ೪ |
| ೨೯ | ಗೇಣು ಹೊಟ್ಟೆಗಾಗಿ (ಕಥಾಸಂಗ್ರಹ) | ೦ ೮ |
| ೩೦ | ಉಕ್ಕಿನ ಮನುಷ್ಯ (ರಾಜಕೀಯ) | ೨ ೦ |
| ೩೧ | ಮರುಭೂಮಿಯ ಅಂಬರು | ೧ ೨ |

## ಸಿಟಿ ಬುಕ್ ಸ್ಟಾಲ್

### ದುರ್ಗದ ಬೈಲು, ಹು